

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ

ಎಂ.ಫಿಲ್.ಪದವಿಯ ನಿಬಂಧ

# "ಬೇಗೂರು- ಒಂದು ಸಾಂಸ್ಕೃತಿಕ ಅಧ್ಯಯನ"

ಸಂಶೋಧನ ವಿದ್ಯಾರ್ಥಿ

ಮುನಿರಾಜ.ಪಿ

ಮಾರ್ಗದರ್ಶಕರು

ಪ್ರೊ.ಕೆ.ಎಸ್.ಮಧುಸೂದನ



ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ

ಬೆಂಗಳೂರು

೨೦೦೯





ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ

ಎಂ.ಫಿಲ್.ಪದವಿಯ ನಿಬಂಧ

# "ಬೇಗೂರು- ಒಂದು ಸಾಂಸ್ಕೃತಿಕ ಅಧ್ಯಯನ"

ಸಂಶೋಧನ ವಿದ್ಯಾರ್ಥಿ
ಮುನಿರಾಜ.ಪಿ



ಮಾರ್ಗದರ್ಶಕರು
ಪ್ರೊ.ಕೆ.ಎಸ್.ಮಧುಸೂದನ



ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ
ಬೆಂಗಳೂರು

೨೦೦೯

## ಅಭ್ಯರ್ಥಿಯ ಪ್ರಮಾಣಪತ್ರ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೮-೨೦೦೯ನೇ ಸಾಲಿನ ಎಂ.ಫಿಲ್ ಪದವಿಗಾಗಿ **"ಬೇಗೂರು-ಒಂದು ಸಾಂಸ್ಕೃತಿಕ ಅಧ್ಯಯನ"** ಎಂಬ ನಿಬಂಧವನ್ನು ಪ್ರೊ.ಕೆ.ಎಸ್.ಮಧುಸೂದನ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ನಿಬಂಧ ನನ್ನ ಸ್ವಂತ ಬರವಣಿಗೆ ಆಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಸಹಿ/

(ಮುನಿರಾಜ.ಪಿ)
ಸಂಶೋಧನ ವಿದ್ಯಾರ್ಥಿ

ದಿನಾಂಕ : ೨೯-೦೯-೨೦೦೯
ಸ್ಥಳ : ಬೆಂಗಳೂರು.

# ಮಾರ್ಗದರ್ಶಕರ ಪ್ರಮಾಣಪತ್ರ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೮ – ೨೦೦೯ನೇ ಸಾಲಿನ ಎಂ.ಫಿಲ್ ಪದವಿಗಾಗಿ **"ಬೇಗೂರು – ಒಂದು ಸಾಂಸ್ಕೃತಿಕ ಅಧ್ಯಯನ "** ಎಂಬ ನಿಬಂಧವನ್ನು ಮುನಿರಾಜ.ಪಿ. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ನಿಬಂಧ ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಸಹಿ

(ಪ್ರೊ.ಕೆ.ಎಸ್.ಮಧುಸೂದನ)
ಮಾರ್ಗದರ್ಶಕರು

ದಿನಾಂಕ : ೨೯-೦೯-೨೦೦೯
ಸ್ಥಳ : ಬೆಂಗಳೂರು.

# ಅಧ್ಯಾಯ – ೧

## ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ಯಾವುದೇ ಐತಿಹಾಸಿಕ ಕ್ಷೇತ್ರವನ್ನು ಅಧ್ಯಯನ ಮಾಡಹೊರಟವರಿಗೆ ಎಲ್ಲಾ ಕ್ಷೇತ್ರದಿಂದಲೂ ಆಧಾರಗಳನ್ನು ಸ್ವೀಕರಿಸಿ ಸರಿಯಾದ ಆಧಾರವನ್ನು ಆಯ್ಕೆ ಮಾಡಿಕೊಳ್ಳುವ ಜವಾಬ್ದಾರಿ ಸಂಶೋಧಕನ ಮೇಲಿರುತ್ತದೆ. ಬೇಗೂರು ಕ್ಷೇತ್ರದ ಅಧ್ಯಯನವು ಸಹ ಬಹು ಪ್ರಮುಖವಾಗಿದ್ದು ಹಲವಾರು ವಿಷಯಗಳ ಬಗ್ಗೆ ಸೂಕ್ತ ನಿರ್ಣಯಗಳನ್ನು ಕೈಗೊಳ್ಳಬೇಕಾದಾಗ ನೇರವಾದ, ಪ್ರಮುಖವಾದ ಆಧಾರಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾಗಿರುವುದು ಸೂಕ್ತವಾದ ವಿಷಯವಾಗಿದೆ. ಒಂದು ಕ್ಷೇತ್ರದ ಇತಿಹಾಸವನ್ನು ಕಟ್ಟಿಕೊಡುವುದು ಎಂದಾಗ ಅಲ್ಲಿನ ಜನತೆಯ ಬದುಕಿನ ರೀತಿ, ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಅದರ ಜೊತೆಗೆ ಜೀವನ ಸಮಸ್ಯೆಗಳು, ಅಲ್ಲಿನ ಆಚರಣೆ, ಜೀವನಮೌಲ್ಯಗಳು, ಸಾಮೂಹಿಕ ಸಮಾರಂಭಗಳು ಎಲ್ಲವನ್ನು ಒಳಗೊಂಡಿದ್ದು ಎಂದು ಹೇಳಬಹುದು. ಡಾ.ಎಂ.ಚಿದಾನಂದಮೂರ್ತಿ ಯವರು ಹೇಳುವಂತೆ "ಜನತೆಯ ಜೀವನವನ್ನು ಕುರಿತಾದ ಇಂತಹ ಅಧ್ಯಯನವನ್ನು ಸಾಮಾಜಿಕ ಅಧ್ಯಯನವೆಂದೋ, ಸಾಂಸ್ಕೃತಿಕ ಅಧ್ಯಯನವೆಂದೋ ಕರೆಯಬಹುದು. ಸಾಂಸ್ಕೃತಿಕ ಅಧ್ಯಯನ ಎನ್ನುವ ಉಕ್ತಿಯೇ ಹೆಚ್ಚು ಉಚಿತವಾದುದು"[೧] ಎಂದಿದ್ದಾರೆ.

ಇತ್ತೀಚಿನ ಬೆಳವಣಿಗೆಯಲ್ಲಿ ಸಾಂಸ್ಕೃತಿಕ ಅಧ್ಯಯನವೆಂಬುದು ಬಹುಮುಖ್ಯ ಹಾಗೂ ಮಹತ್ವದ ಅಧ್ಯಯನವಾಗಿದ್ದು, ಸಾಹಿತ್ಯದ ಒಂದು ಭಾಗವಾಗಿ ಚರ್ಚಿಸಲಾಗುತ್ತದೆ. ಹೆಸರಾಂತ ವಿದ್ವಾಂಸರಾದ ಡಾ.ರಹಮತ್ ತರಿಕೆರೆಯವರು ಈ ಸಾಂಸ್ಕೃತಿಕ ಅಧ್ಯಯನದ ಬಗ್ಗೆ ಬಹು ಮಹತ್ವದ ವಿಚಾರಗಳನ್ನು ಚರ್ಚಿಸಿರುವುದನ್ನು ಕಾಣುತ್ತೇವೆ. ಈ ಹಿನ್ನೆಲೆಯಲ್ಲಿ ಒಂದು ಊರಿನ ಸಾಂಸ್ಕೃತಿಕ ಅಧ್ಯಯನ ಮಾಡುವುದು ಸೂಕ್ತ ಹಾಗೂ ಸಮರ್ಪಕ ಎಂದುಕೊಂಡಿರುವ ನನಗೆ ಬೇಗೂರಿನ ಬಗ್ಗೆ ಸಾಂಸ್ಕೃತಿಕವಾಗಿ, ಐತಿಹಾಸಿಕವಾಗಿ ಸಮಗ್ರ ಚಿತ್ರಣವನ್ನು ಕಟ್ಟಿಕೊಡುವ ಕಾರ್ಯ ಮಾಡುತ್ತಿದ್ದೇನೆ. ಬೇಗೂರು ಕ್ಷೇತ್ರದ ಅಧ್ಯಯನವನ್ನು ಪುನಃ ರಚಿಸಿಕೊಡುವಲ್ಲಿ ನಮಗೆ ಸಿಗುವ ಬಹುಮುಖ್ಯವಾದ ಆಧಾರಗಳೆಂದರೆ ಶಾಸನಗಳು.

ನಾನು ಮೊದಲೇ ಹೇಳಿದಂತೆ ಬೇಗೂರನ್ನು ಪುನಃರಚಿಸುವ ಕಾರ್ಯ ಶಾಸನಗಳ ದೃಷ್ಟಿಯಿಂದ ಮಾಡಬೇಕಾಗಿದೆ. ಈ ಕ್ಷೇತ್ರದಲ್ಲಿ ನಮಗೆ ಪ್ರಧಾನ ಆಧಾರವಾಗಿ ಸಿಗುವ ಶಾಸನಗಳನ್ನು ಈಗಾಗಲೇ ಬಿ.ಎಲ್.ರೈಸ್, ಡಾ.ಎಂ.ಚಿದಾನಂದಮೂರ್ತಿ, ಡಾ.ಶೇಷಶಾಸ್ತ್ರೀ, ಡಾ.ದೇವರಕೊಂಡಾ ರೆಡ್ಡಿ ಮುಂತಾದ ಹಲವಾರು ವಿದ್ವಾಂಸರು ಇಲ್ಲಿನ ಶಾಸನಗಳು ಕಲೆ–ವಾಸ್ತುಶಿಲ್ಪದ ಬಗೆಗೆ ಬಿಡಿ–ಬಿಡಿಯಾಗಿ ಅಧ್ಯಯನ ಮಾಡಿ ಗಮನಸೆಳೆದಿರುವುದನ್ನು ಕಾಣಬಹುದು. ಯಾವೊಬ್ಬ ವಿದ್ವಾಂಸರು ಸಹ ಬೇಗೂರಿನ ಬಗ್ಗೆ ಪರಿಪೂರ್ಣವಾದ ಸಾಂಸ್ಕೃತಿಕ ಅಧ್ಯಯನ ಮಾಡಲಿಲ್ಲ. "ಇಲ್ಲಿನ ಯುದ್ಧ ಚಿತ್ರಣವಿರುವ ಶಾಸನ"[೨]

"ಬೆಂಗಳೂರು ಪದ ಪ್ರಯೋಗವಿರುವ ಶಾಸನ"[೩] ಹಾಗೂ "ಕೆರೆ-ದೇವಾಲಯ ನಿರ್ಮಾಣದ ನಾಗತ್ತರನ ಶಾಸನ"[೪] ಮುಂತಾದವನ್ನು ಅವರ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಂಡರೆ ವಿನಃ ಸಮಗ್ರವಾದ ಅಧ್ಯಯನ ನಡೆದಿಲ್ಲ. ಸ್ವಲ್ಪಮಟ್ಟಿಗೆ ದೇವರಕೊಂಡಾರೆಡ್ಡಿಯವರು ತಮ್ಮ ಕೃತಿಯಾದ "ತಲಕಾಡು ಗಂಗರ ದೇವಾಲಯಗಳು ಒಂದು ಅಧ್ಯಯನ" ಎಂಬ ಕೃತಿಯಲ್ಲಿ ಬೇಗೂರಿನ ಬಗ್ಗೆ ಮಹತ್ವ ವಿಚಾರಗಳನ್ನು ಚರ್ಚಿಸಿರುವುದು ಬೇಗೂರಿನ ಅಧ್ಯಯನದ ವಿಷಯದಲ್ಲಿ ಮಹತ್ವವಾಗಿದೆ. ನನ್ನ ಬಹುಮುಖ್ಯ ಉದ್ದೇಶ ಬೇಗೂರಿನ ಸಾಂಸ್ಕೃತಿಕ ಅಧ್ಯಯನಕ್ಕೆ ಪ್ರಧಾನ ಆಧಾರಗಳಾದ ಶಾಸನಗಳ ಮೂಲಕ "ಬೇಗೂರು ಒಂದು ಸಾಂಸ್ಕೃತಿಕ ಅಧ್ಯಯನ" ಎಂಬ ಶೀರ್ಷಿಕೆಯ ಅಡಿಯಲ್ಲಿ ಜನಪದೀಯ ಹೇಳಿಕೆಗಳು ಹಾಗೂ ಇತರೆ ಗ್ರಂಥಗಳಲ್ಲಿನ ವಿಷಯಗಳನ್ನು ಆಧರಿಸಿ ಸಮಗ್ರ ಬೇಗೂರು ಶಾಸನಗಳು, ದೇವಾಲಯ, ಮಣ್ಣಿನಕೋಟೆ, ಸಾಮಾಜಿಕ ಸ್ಥಿತಿಗತಿ, ಆರ್ಥಿಕವ್ಯವಸ್ಥೆ ಈ ಎಲ್ಲಾ ವಿಷಯಗಳ ಮೇಲೂ ಬೆಳಕನ್ನು ಚೆಲ್ಲುವುದಾಗಿದೆ.

'ಬೇಗೂರು ಒಂದು ಸಾಂಸ್ಕೃತಿಕ ಅಧ್ಯಯನ'ವನ್ನು ಸ್ವರೂಪ ದೃಷ್ಟಿಯಿಂದ ನೋಡಿದಾಗ ಈ ಅಧ್ಯಯನವನ್ನು ಕೇವಲ ಒಂದು ವಿಧಾನದಿಂದ ಅಧ್ಯಯನ ಮಾಡಿ ಪೂರ್ಣಗೊಳಿಸಲಾಗುವುದಿಲ್ಲ. ಕಾರಣ ಶಾಸನಗಳನ್ನು ದಾಖಲಿಸಬೇಕಾದ್ದರಿಂದ ಈ ಕ್ಷೇತ್ರದಲ್ಲಿ ಸಿಗಬಹುದಾದ ಶಾಸನಗಳನ್ನು ಸಂಗ್ರಹಿಸಿ ಅದರ ವಿಷಯವನ್ನು ಗ್ರಹಿಸಬೇಕು ಹಾಗೂ ಜನಪದೀಯರ ಬಳಿ ಹೋಗಿ ವಿಷಯ ಸಂಗ್ರಹಿಸಬೇಕಾದ್ದರಿಂದ ಕ್ಷೇತ್ರಕಾರ್ಯ ಅತ್ಯಗತ್ಯ. ಜೊತೆಗೆ ವಿವರಣಾತ್ಮಕವಾದ ಒಂದು ಅಧ್ಯಯನವನ್ನು ಸಹ ಮಾಡಬೇಕಾಗುತ್ತದೆ.

ಮೊದಲೇ ಹೇಳಿದಂತೆ ಸಮಗ್ರವಾದ ಅಧ್ಯಯನವಾದ್ದರಿಂದ ಶಾಸನಗಳ ಮೂಲಕ ಬೇಗೂರಿನ ಅಧ್ಯಯನ, ಸಾಮಾಜಿಕ ಜೀವನ, ಧಾರ್ಮಿಕ ಸ್ಥಿತಿಗತಿ ಹೇಗಿತ್ತು ಹಾಗೂ ಈ ಪ್ರದೇಶಕ್ಕೆ ಯಾವ ಯಾವ ರಾಜವಂಶಸ್ಥರು ಸಂಬಂಧವನ್ನು ಹೊಂದಿದ್ದರು ಬೆಂಗಳೂರು ಕಾಳಗಕ್ಕೂ, ಇಲ್ಲಿನ ಪಟ್ಟಣಶೆಟ್ಟಿಗೂ ಇರುವ ಸಂಬಂಧವೇನು? ನಾಗತ್ತರನು ಯಾವ ರೀತಿ ಯುದ್ಧದಲ್ಲಿ ಸತ್ತ, ಗಂಗರಿಗೂ ಈ ಕ್ಷೇತ್ರದ ಮಾಂಡಲಿಕರಿಗೂ ಇರುವಂತಹ ಸಂಬಂಧಯಂತದ್ದು. ಹಾಗೂ ಇಲ್ಲಿನ ಪ್ರಸಿದ್ಧ ನಾಗೇಶ್ವರ ದೇವಾಲಯಕ್ಕೂ ಹಾಗೂ ಈ ಕ್ಷೇತ್ರದ ಇತರೆ ದೇವಾಲಯಗಳಿಗೂ ಇರುವ ಸಂಬಂಧವೇನು? ಈ ಕ್ಷೇತ್ರದ 'ಬೆಂಪೂರು-೧೨'ರ ಸ್ಥಳನಾಮಗಳ ಮಹತ್ವ, ಇಲ್ಲಿ ಸಾಮಾಜಿಕ, ರಾಜಕೀಯ, ಧರ್ಮವ್ಯವಸ್ಥೆ, ಇಲ್ಲಿನ ಮಣ್ಣಿನಕೋಟೆಯ ವಿಶೇಷತೆ ಹಾಗೂ ಈ ಕ್ಷೇತ್ರದಲ್ಲಿಯ ಮುಖ್ಯವಾದ ಸ್ಮಾರಕಶಿಲೆಗಳು, ಇಂದು ಬೇಗೂರಿನ ಪರಿಸ್ಥಿತಿ ಯಾವ ಮಟ್ಟದಲ್ಲಿದೆ. ಆಧುನಿಕೋತ್ತರವಾಗಿ ಈ ಕ್ಷೇತ್ರದ ಸ್ಥಿತಿ ಏನಾಗಿದೆ? ಹೀಗೆ ಎಲ್ಲಾ ರೀತಿಯಿಂದಲೂ ಸಮಗ್ರವಾದ ಒಂದು ಅಧ್ಯಯನವನ್ನು ಈ ಸಂಶೋಧನೆಯಲ್ಲಿ ಅಳವಡಿಸಿಕೊಳ್ಳಲಾಗಿದೆ.

## ಅಡಿ ಟಿಪ್ಪಣಿ

೧. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ : ಡಾ.ಎಂ.ಚಿದಾನಂದಮೂರ್ತಿ, ಪುಟ–೧

೨. ಎಪಿಗ್ರಾಫಿಯಾ ಕರ್ನಾಟಿಕ – IX ಬೆಂಗಳೂರು ಸಂಖ್ಯೆ–೮೩

೩. ಎಪಿಗ್ರಾಫಿಯಾ ಕರ್ನಾಟಿಕ – IX ಬೆಂಗಳೂರು ಸಂಖ್ಯೆ – ೮೪

೪. ಇತಿಹಾಸ ದರ್ಶನ: ಡಾ.ದೇವರಕೊಂಡಾರೆಡ್ಡಿ, ಸಂಪುಟ–೩, ಸಂಚಿಕೆ–೧–೧೯೮೮ ಪುಟ–೧೫೫

# ಅಧ್ಯಾಯ – ೨

## 'ಬೆಂಪೂರು-೧೨'ರ ಕ್ಷೇತ್ರದ ಸ್ಥಳನಾಮಗಳ ಅಧ್ಯಯನ

'ಬೆಂಪೂರು-೧೨ರ ಸ್ಥಳನಾಮವನ್ನು ಅಧ್ಯಯನ ಮಾಡುವ ಮೊದಲು ಸ್ಥಳನಾಮದ ಇತಿಹಾಸ, ಬೆಳೆದುಬಂದ ದಾರಿ. ಅದರ ಮಹತ್ವದ ಬಗ್ಗೆ ಅವಲೋಕಿಸುವುದು ಸೂಕ್ತವೆನಿಸುತ್ತದೆ. ಇಂಗ್ಲೀಷ್‌ನಲ್ಲಿ ಸ್ಥಳನಾಮ ಶಾಸ್ತ್ರವನ್ನು 'Topo nomy' ಎಂದು ಕರೆಯುತ್ತಾರೆ. ಇದು ಮೂಲತಃ ಗ್ರೀಕ್‌ನ 'Tops' ಮತ್ತು 'Noms' ಎಂಬ ಎರಡು ಸಂಯುಕ್ತ ಪದಗಳಿಂದ ಬಂದುದಾಗಿದೆ. ಇತ್ತೀಚೆಗೆ ಇದೊಂದು ಅಧ್ಯಯನ ಶಾಖೆಯಾಗಿ ಸುವ್ಯವಸ್ಥಿತ ಶಾಸ್ತ್ರವಾಗಿ ಬೆಳೆದುಬಂದಿದೆ. ಆದ್ದರಿಂದ ಅದನ್ನು 'A Science of Place Placenames' ಸ್ಥಳಗಳನ್ನು,, ಸ್ಥಳನಾಮಗಳನ್ನು ಕುರಿತ ಅಧ್ಯಯನ ಮಾಡುವ ವಿಜ್ಞಾನ ಎಂದೇ ಹೇಳಬಹುದು.

ಸ್ಥಳನಾಮ ವಿಜ್ಞಾನದ ಬೆಳವಣಿಗೆ ಇತ್ತೀಚಿನದು ನಮ್ಮ ದೇಶದ ಮಟ್ಟಿಗಂತೂ ತೀರಾ ಹೊಸತಾದುದು ಎನ್ನಬೇಕು. ಬಹುಪಾಲು ಅರ್ಥಗರ್ಭಿತವಾಗಿರುವ ಸ್ಥಳನಾಮಗಳ ಅಧ್ಯಯನ ವೈಜ್ಞಾನಿಕವಾಗಿ ಪ್ರಾರಂಭಗೊಂಡಿದ್ದೇ ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಎರಡೂವರೆ ಸಾವಿರ ವರ್ಷಗಳ ಹಿಂದೆಯೇ ಪಾಣಿನಿ ಸ್ಥಳನಾಮಗಳ ಸಾಂಸ್ಕೃತಿಕ ಲಕ್ಷಣಗಳನ್ನು ಗುರುತಿಸಿದ್ದ ಅಲ್ಲಿಂದೀಚೆಗೆ ಸ್ಥಳನಾಮಗಳ ಉಲ್ಲೇಖ ಸಾಹಿತ್ಯ ಗ್ರಂಥಗಳಲ್ಲಿ ಕಾಣಿಸಿಕೊಂಡವು, ಸರಕಾರಿ ಕಡತ ಹಾಗೂ ದಾಖಲೆಗಳಲ್ಲಿ ಅವುಗಳ ಪಟ್ಟಿ ಪ್ರಕಟವಾದರೂ ಅವುಗಳ ಉಪಯುಕ್ತತೆಯನ್ನು ಕಂಡುಕೊಂಡಿರಲಿಲ್ಲ. ಸ್ಥಳನಾಮಗಳು ಅರ್ಥಗರ್ಭಿತವಾದವುಗಳೆಂದರೂ ಅವುಗಳಿಗೆ ಒಂದು ಮಹತ್ವದ ಅರ್ಥ ಇದೆಯೆಂದೂ, ಅವುಗಳ ಪ್ರಾಚೀನ ರೂಪಗಳನ್ನು ಪರಿಶೀಲಿಸುವುದರ ಮೂಲಕ ಅರ್ಥವನ್ನು ನಿರ್ಣಯಿಸಬಹುದೆಂದು ಮೊಟ್ಟ ಮೊದಲು ತೋರಿಸಿಕೊಟ್ಟ ಕೀರ್ತಿ ಜರ್ಮನಿಯ 'ಗಾಟ್ ಪ್ರೀಟ್ ವಿಲ್‌ಹೆಲ್ಮ್ ಲಿಬ್ನಿಜ್' (Gott Fxied willhelm libniz-1768) ರವರಿಗೆ ಸಲ್ಲುತ್ತದೆ. ಆದುದರಿಂದ ಈತನನ್ನು ಸ್ಥಳನಾಮ ಶಾಸ್ತ್ರದ ಪಿತಾಮಹನೆಂದು ಕರೆಯಲಾಗಿದೆ. ಆದರೂ ಸ್ಥಳನಾಮಾರ್ಥ ವಿವರಣೆಯ ಆರಂಭದ ಯತ್ನಗಳು ಕ್ರಮಬದ್ಧವಾಗಿರದೆ ಅವೈಜ್ಞಾನಿಕವಾಗಿದ್ದವು.

ಸ್ಥಳನಾಮ ಸಂಶೋಧನೆಯಲ್ಲಿ ಹೆಸರುಗಳ ಐತಿಹಾಸಿಕ ವಿಕಾಸಕ್ಕೂ, ಭೌಗೋಳಿಕ ಪರಿಸ್ಥಿತಿ, ಸನ್ನಿವೇಶಗಳ ವಿವರಣೆಗೂ ಬಹುಮುಖ್ಯ ಗಮನ ನೀಡಬೇಕಾಗುತ್ತದೆ ಎಂಬುದು ಗಮನಾರ್ಹ ವಿಷಯ. ಅವುಗಳ ಅಧ್ಯಯನದಿಂದ ಸಾಂಸ್ಕೃತಿಕ ಲಾಭ ಮಾತ್ರವಲ್ಲ. ಹಲವಾರು ಜ್ಞಾನಶಾಖೆಗಳಿಗೆ ಪ್ರಯೋಜನವಾಗುತ್ತದೆ ಎಂಬುದನ್ನು ತಿಳಿಯಬೇಕು.

ಈ ಸ್ಥಳನಾಮ ಅಧ್ಯಯನ ಕ್ಷೇತ್ರಕ್ಕೆ ಪಾಶ್ಚಾತ್ಯರ ಕೊಡುಗೆ ಅಪಾರ 'ಸ್ಕೀಟ್', ಫ್ರಾನ್ಸ್‌ನ 'ಲಾಂಗ್ಮನೆ', ನಾರ್ವೆಯ 'ರೈ' (Rygn) ಸ್ವೀಡನ್ನಿನ 'ನೋರಿನ್' (Norrn) ಇಂಗ್ಲೆಂಡಿನ 'ಎರ್ಲಿ' ಮುಂತಾದವರು ಬಹುಮುಖ್ಯ ಕೊಡುಗೆಗಳನ್ನು ನೀಡಿದರು. ಇವರ ಒಂದು ಕೊಡುಗೆ ಸ್ಥಳನಾಮ ವಿಜ್ಞಾನದ ಇತಿಹಾಸದಲ್ಲಿ ಮೈಲಿಗಲ್ಲು ಎನ್ನಬಹುದು. ಪುರಾತತ್ವಜ್ಞರ, ಭಾಷಾವಿಜ್ಞಾನಿಗಳ, ಇತಿಹಾಸಕಾರರ, ಅಂತೆಯೇ ಇತರ ಪರಿಣತರ ನೆರವು ಪಡೆದು ಸ್ಥಳನಾಮಗಳ ಅಧ್ಯಯನಕ್ಕೆ ವೈಜ್ಞಾನಿಕ ಸ್ವರೂಪ ನೀಡುವುದರಲ್ಲಿ ಅದು ಯಶಸ್ವಿಯಾಯಿತು. ಸಾಂಸ್ಕೃತಿಕ ರಚನೆಗೆ ಅಂತಹ ಅಧ್ಯಯನ ಅನಿವಾರ್ಯ ಎಂಬುದನ್ನು ಅದು ಸ್ಪಷ್ಟಪಡಿಸಿತು.

ಈ ದಿಸೆಯಲ್ಲಿ ಭಾರತೀಯ ಮಟ್ಟಿಗೆ ನೋಡಿದಾಗ ನಾವು ಹೆಸರಿಸಲೇಬೇಕಾದ ವ್ಯಕ್ತಿ ಎಂದರೆ 'ಎಚ್.ಡಿ. ಸಂಕಾಲಿಯ' ಸ್ಥಳನಾಮಗಳನ್ನು ಕುರಿತ ಪ್ರಬುದ್ಧ ಲೇಖನಗಳು ಐದಾರು ದಶಕಗಳಿಂದ ವಿರಳ ವಿರಳವಾಗಿ ಪತ್ರಿಕೆಗಳಲ್ಲಿ ಪ್ರಕಟಗೊಳ್ಳುತ್ತಿದ್ದರೂ ಅವುಗಳ ಅಧ್ಯಯನಕ್ಕೆ ಪೂರ್ಣಸ್ವರೂಪವನ್ನು ನೀಡಿ ಭದ್ರವಾದ ಬುನಾದಿಯನ್ನು ಹಾಕಿದರು.

ಸ್ಥಳನಾಮಗಳ ಪೂರ್ವಾಪರ ವಿಚಾರವನ್ನು ಕೂಲಂಕಷವಾಗಿ ಅಧ್ಯಯನ ಮಾಡಿ, ಧಾರ್ಮಿಕ ಸಂಪ್ರದಾಯಗಳ ಹಿನ್ನೆಲೆಯಲ್ಲಿ ಅವುಗಳನ್ನು ವಿಶ್ಲೇಷಿಸುವುದಾದರೆ ಜನಾಂಗೀಯ, ಭೌಗೋಳಿಕ ವಿವರಣೆ ಸಾಧ್ಯವೆಂಬುದನ್ನು ಅವರು ತೋರಿಸಿಕೊಟ್ಟರು. ಜೊತೆಗೆ ಆಯಾಯ ಕಾಲದ ಭಾಷೆಯ ಸ್ಥಿತಿಗತಿಗಳನ್ನು ನಿರ್ಣಯಿಸುವಲ್ಲಿ ರಾಜಕೀಯ ಹಾಗೂ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಗ್ರಹಿಸುವಲ್ಲಿ ಲಾಭವಾಗುತ್ತದೆಂದು ಅವರು ತಿಳಿಸಿದರು.

ಕರ್ನಾಟಕದ ಸ್ಥಳನಾಮಗಳನ್ನು ಕುರಿತಂತೆ ಅಧ್ಯಯನ ಪ್ರಾರಂಭವಾದುದು ಇತ್ತೀಚೆಗೆ. ತಮಿಳು, ತೆಲುಗು, ಮಲೆಯಾಳಂ ಭಾಷೆಗಳಲ್ಲಿ ನಡೆದಿರುವ ಸ್ಥಳನಾಮ ಅಧ್ಯಯನಗಳೊಡನೆ ಹೋಲಿಸಿದಾಗ ಕನ್ನಡದಲ್ಲಿ ನಡೆದಿರುವ ಇಂತಹ ಅಧ್ಯಯನಗಳು ತೀರಾ ಕಡಿಮೆ ಎಂದೇ ಹೇಳಬೇಕಾಗುತ್ತದೆ.

೧೯ನೇಯ ಶತಮಾನದ 'ಕರ್ನಲ್ ಮೆಕೆಂಜಿ'ಯವರು ಗ್ರಾಮ ಚರಿತ್ರೆಗಳ ಕೈಫಿಯತ್ತುಗಳನ್ನು ಬರೆಸಿದರು. ಇವು ಅಲ್ಲಿಯ ಶಾನುಭೋಗರೋ, ಅಕ್ಷರತಜ್ಞರೋ, ಬರೆದುಕೊಟ್ಟವುಗಳಾಗಿದ್ದರೂ, ಅವರು ಅಲ್ಲಿಯ ಸ್ಥಳನಾಮ ಪುರಾಣಗಳನ್ನು ಪ್ರಚಲಿತ ವದಂತಿಗಳನ್ನು ಅವಲಂಬಿಸಿರುವುದರಿಂದ ಈ ಘಟ್ಟದಲ್ಲಿಯೂ ಗ್ರಾಮನಾಮ ವ್ಯಾಸಂಗಕ್ಕೆ ಉಪಯೋಗ ಬೀಳುವ ಮಾಹಿತಿ ಹುಟ್ಟಿರಲಿಲ್ಲವೆಂದೇ ಹೇಳಬೇಕು. ಕಿಟಲ್ ನಿಘಂಟು ಕೆಲವು ಊರುಗಳ ಹೆಸರುಗಳನ್ನು ಗುರುತಿಸಿದರೂ ಅವುಗಳ ನಿಷ್ಪತ್ತಿಯ ಬಗ್ಗೆ ತಟಸ್ಥವಾಗಿದೆ.

ಹೀಗಾಗಿ 'ಸಿ.ಹಯವದನರಾಯ'ರು 'The Place names of Mysore state' ಪ್ರಾರಂಭಿಕ ದೆಸೆಯ ಗಮನಾರ್ಹ ಕೃತಿಯಾಗಿದೆ. 'ಸಿ.ಹಯವದನರಾಯ'ರು ಮೈಸೂರು ಗೆಜೆಟಿಯರ್‌ನಲ್ಲಿ ಕೆಲವು ಗ್ರಾಮ ನಾಮಗಳನ್ನು ಕುರಿತು ನಡೆಸಿರುವ ವಿಶ್ಲೇಷಣೆ ಸಮರ್ಪಕವಲ್ಲದಿದ್ದರೂ ಆ ಕ್ಷೇತ್ರದಲ್ಲಿ ಕೆಲಸ ಮಾಡುವವರಿಗೆ ಮಾರ್ಗದರ್ಶಕ ಸೂಚನೆಗಳು ದೊರೆಯುತ್ತಿವೆ ಎಂಬುದು ನಿಜವಾದ ಸಂಗತಿ. ಈ ದೆಸೆಯಲ್ಲಿ ಪ್ರಾಮಾಣಿಕ ಸಂಶೋಧನೆ ನಡೆಸಿ ಕರ್ನಾಟಕದ ಸ್ಥಳನಾಮಗಳ ಬಗ್ಗೆ ಮೊದಲು ಬಹು ಪ್ರಮಾಣದಲ್ಲಿ ಕ್ಷ-ಕಿರಣ ಹರಿಸಿದವರೆಂದರೆ ಶಂ.ಬಾ.ಜೋಷಿಯವರು. ಅವರು ಕಂನಾಡಕತೆಯ ಸ್ಥಳನಾಮಗಳ ಅಧ್ಯಯನದ ಪರಿಣಾಮವಾಗಿ ಮೂಡಿದ ತತ್ವಗಳನ್ನು ಪ್ರತಿಪಾದಿಸಿದ್ದಾರಲ್ಲದೆ ಅವುಗಳ ಹಿನ್ನೆಲೆಯಲ್ಲಿ ಪುರಾಣ, ಇತಿಹಾಸ, ಧರ್ಮ, ಜನಾಂಗ ಮತ್ತು ಸಂಸ್ಕೃತಿಗಳ ಮೇಲೆ ಮಹತ್ವಪೂರ್ಣ ಬೆಳಕನ್ನು ಚೆಲ್ಲಿದ್ದಾರೆ. ಡಾ.ಎಂ.ಚಿದಾನಂದಮೂರ್ತಿ ಅವರ 'ಕರ್ನಾಟಕ ಸ್ಥಳನಾಮಗಳು' ಈ ದೆಸೆಯಲ್ಲಿ ಮಹತ್ವಪೂರ್ಣ ಲೇಖನವಾಗಿದೆ. ಆ ನಂತರದಲ್ಲಿ 'ಶ್ರೀಕೆಮ್ಮೂರು' 'ರಘುಪತಿಭಟ್ಟ'ರು ಹಲವಾರು ಬಿಡಿಲೇಖನಗಳನ್ನು ಹಾಗೂ 'ತುಳುನಾಡಿನ ಸ್ಥಳನಾಮಗಳು' ಎಂಬ ಗ್ರಂಥವನ್ನು, ಶ್ರೀ.ವಿ.ಗೋಪಾಲಕೃಷ್ಣ ಅವರು 'ಸ್ಥಳೀಯ ಅಧ್ಯಯನಗಳು' ಎಂಬ ಹೆಸರಿನ ಸಂಕಲನವನ್ನು ಪ್ರಕಟಿಸಿರುವುದನ್ನು ಗಮನಿಸಬಹುದು. ಜೊತೆಗೆ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಕೋಲಾರ ಜಿಲ್ಲೆಯ ಸ್ಥಳನಾಮಗಳು, ಸಾಮಾಜಿಕ ಭಾಷಾ ಅಧ್ಯಯನ ಎಂಬ ಮಹಾನಿಬಂಧವನ್ನು ಸಲ್ಲಿಸಿ ಡಾಕ್ಟರೇಟ್ ಪದವಿಯನ್ನು ಪಡೆದಿದ್ದಾರೆ. ಡಾ.ಎಂ.ಎಂ.ಕಲ್ಬುರ್ಗಿಯವರ 'ನಾಮವಿಜ್ಞಾನ' ಮತ್ತು ಡಾ.ದೇ.ಜವರೇಗೌಡರ 'ಸ್ಥಳನಾಮ ವ್ಯಾಸಂಗ' ಇತ್ತೀಚಿನ ಗಮನಾರ್ಹ ಕೃತಿಗಳಾಗಿವೆ.

ಈ ಅಧ್ಯಯನಗಳ ಹಿನ್ನೆಲೆಯಲ್ಲಿ ಒಂದು ಸ್ಥಳನಾಮ ಅಧ್ಯಯನದ ಮಹತ್ವ, ವಿಧಾನ, ರೀತಿ-ನೀತಿಗಳು ಎಷ್ಟು ಮುಖ್ಯ ಎಂಬುದು ಅರಿವಾಗುತ್ತದೆ. ಅಲ್ಲದೆ ಒಂದು ಸ್ಥಳನಾಮ ಅಧ್ಯಯನಕ್ಕೆ ಅಲ್ಲಿನ ಪರಿಸರ, ಭೌಗಳಿಕ ಲಕ್ಷಣ, ಧರ್ಮ, ಜನಾಂಗ, ಸಾಮಾಜಿಕ ಜೀವನ, ರಾಜಕೀಯ ಬೆಳವಣಿಗೆ ಮುಂತಾದ ಎಲ್ಲಾ ಅಂಶಗಳ ಮೇಲೆ ಬೆಳಕನ್ನು ಚೆಲ್ಲುತ್ತದೆ. ಕನ್ನಡ ಸಾಹಿತ್ಯ ಹೇಗೆ ಕಾಲ ಕಾಲಕ್ಕೆ ಬೆಳೆಯುತ್ತ ಬಂದಂತೆ ಭಾಷಾವ್ಯತ್ಯಾಸಗಳನ್ನು ಗಮನಿಸಬಹುದು. ಹಾಗೆಯೇ ಒಂದು ಊರಿಗೆ ಇಟ್ಟಿರುವ ಹೆಸರು ಕಾಲಾಂತರದಲ್ಲಿ ಬದಲಾವಣೆ ಹೊಂದುತ್ತ ಬಂದಿದೆ. ಅದು ಕೇವಲ ಒಂದು ಭಾರಿಯಲ್ಲ ಹಲವು ಭಾರಿ ಬದಲಾವಣೆಗಳನ್ನು ಕಂಡಿರುವುದು ಕಾಣಬಹುದು. ಇಂದು ಮದ್ರಾಸು, ಚೆನ್ನೈ ಆಯಿತು. ಮುಂಬಾಯಿ ಮುಂಬೈ ಆದಂತೆ ಪ್ರಾಚೀನ ಕಾಲದಿಂದಲೂ ಈ ರೀತಿಯ ಬದಲಾವಣೆ ಕೆಲವು ಕಾರಣಾಂತರಗಳಿಂದ ನಡೆದಿರುವುದನ್ನು ಗಮನಿಸಬಹುದು.

ಈ ಹಿನ್ನೆಲೆಯಲ್ಲಿ 'ಬೆಂಪೂರು-೧೨'ರ ಕ್ಷೇತ್ರದ ಸ್ಥಳನಾಮ ಅಧ್ಯಯನ ಒಂದು ಸಾಂಸ್ಕೃತಿಕ ಮಹತ್ವವನ್ನು ಪಡೆದುಕೊಂಡಿದೆ. ಈ ಪ್ರದೇಶದಲ್ಲಿ ೧೨೦೦ ವರ್ಷಗಳಿಂದಲೇ ರಾಜಮನೆತನಗಳ ಆಳ್ವಿಕೆಗೆ

ಒಳಪಟ್ಟು ಜನ ನಿಬೀಡಪ್ರದೇಶವಾಗಿದ್ದು, ಅಂದಿನ '೧೨' ಗ್ರಾಮಗಳ ಹೆಸರನ್ನು ಆಗಲೇ ನಾಗತ್ತರನ ಶಾಸನದಲ್ಲಿ ತಿಳಿಸಲಾಗಿದೆ. ಆದರೆ ಆ ಊರುಗಳ ಹೆಸರು ಸೌಲಭ್ಯಾಕಾಂಕ್ಷೆಯಿಂದಲೋ, ಉಚ್ಛಾರ ದೋಷದಿಂದಲೋ ಬದಲಾವಣೆ ಕಂಡಿರುವುದನ್ನು ಗಮನಿಸಬಹುದು. ಉದಾ:-ಬೇಗೂರು ಎಂಬ ಊರಿಗೆ ಬೇಹೂರು, ಬೇವೂರು, ಬೆಂಪೂರು, ಬೇಗೂರು ಎಂಬ ಹೆಸರುಗಳಿಂದ ಗುರ್ತಿಸುತ್ತಿದ್ದು ಕಂಡು ಬರುತ್ತದೆ. ಆದ್ದರಿಂದ ಮೂಲ ಹೆಸರಿನಿಂದ ಬದಲಾವಣೆಗೊಂಡ ಇಂದಿನ ರೂಪದವರೆಗೆ ಅದರ ಸ್ಥಿತ್ಯಂತರಗಳಿಗೆ ಕಾರಣ ಹಾಗೂ ಅದಕ್ಕೆ ಅರ್ಥವನ್ನು ಹುಡುಕುವುದು ಅನಿವಾರ್ಯವು, ಸಾಂಸ್ಕೃತಿಕವಾಗಿ ಮಹತ್ವಯುತವೂ ಆಗಿದೆ ಎಂದು ಹೇಳಬಹುದು.

**ಬೆಂಪೂರು:-**

ಬೆಂಗಳೂರಿನ ಹೃದಯಭಾಗದಿಂದ ೧೩.ಕಿ.ಮೀ.ದೂರದಲ್ಲಿರುವ ಬೇಗೂರು ಗಂಗರ ಪ್ರಸಿದ್ಧ ಐತಿಹಾಸಿಕ ಸ್ಥಳ ಎಂಬ ಖ್ಯಾತಿಗೆ ಪಾತ್ರವಾಗಿದೆ. ಭೌಗೋಳಿಕವಾಗಿ ಇಲ್ಲಿನ ಪರಿಸರವನ್ನು ಆಧರಿಸಿ ಈ ಊರಿಗೆ ಹೆಸರು ಬಂದಿರುವುದನ್ನು ಕಾಣಬಹುದು. ಬೇಗೂರಿನ ಪ್ರಾಚೀನ ಮೂಲ ಹೆಸರು 'ಬೆಂಪೂರು' ಎಂಬುದು. ಈ ಊರಿನ ಮೂಲ ರೂಪವನ್ನು ಪರಿಗಣಿಸಿದಾಗ ಬೆವು+ಊರು=ಬೆವೂರು ಎಂದು ಪ್ರಸ್ತಾಪವಿರುವುದನ್ನು ಕಾಣುತ್ತೇವೆ. ಈಪ್ರದೇಶದಲ್ಲಿ ಹೆಚ್ಚಾಗಿ ಬೇವಿನ ಮರಗಳು ಕಂಡು ಬರುತಿದ್ದವು. ಆದ್ದರಿಂದ ಪರಿಸರದ ಸೂಚಕವಾಗಿ 'ಬೆವೂರು' ಎಂಬ ಪದ ಬಂದು ತರುವಾಯ 'ವ'ಕಾರ ದೋಷವಾಗಿ 'ಪ'ಕಾರ ಆಗಮದ ನಂತರ 'ಬೆಂಪೂರು' ಎಂದಾಗಿದೆ. ಈ ಪದ ಪ್ರಯೋಗವನ್ನು ನಾಗತ್ತರನ ಕಾಲದಿಂದಲೇ ಬಳಕೆಗೆ ಬಂದಿದೆ. ಶಾಸನದಲ್ಲಿ 'ಬೆಂಪೂರು ಪನ್ನೆರಡು' ಎಂಬ ವಾಕ್ಯ ಬಳಸಲಾಗಿದೆ. ಆದ್ದರಿಂದ ಪ್ರಾಚೀನ ಕಾಲದಿಂದಲೂ 'ಬೆಂಪೂರು' ಎಂದೇ ಕರೆಯಲ್ಪಡುವ ಈ ಪ್ರದೇಶಕ್ಕೆ ಚೋಳರ ಆಗಮನದೊಂದಿಗೆ 'ವೆಪ್ಪೂರು' ಎಂದು ಬದಲಾಗಿರುವುದನ್ನು ಕಾಣಬಹುದು. ತಮಿಳಿನ 'ವೆಪ್ಪು' ಎಂಬುದು ಸಂಸ್ಕೃತದಲ್ಲಿ 'ನಿಂಬಾ' ಎಂಬ ಅರ್ಥವನ್ನು ಸೂಚಿಸುತ್ತದೆ. ಸಂಸ್ಕೃತದ 'ನಿಂಬಾ' ಎಂದರೆ ಬೇವು ಎಂಬರ್ಥವಿದೆ. ಆದ್ದರಿಂದ 'ಬ'ಕಾರ 'ವ'ಕಾರವಾಗಿ ಬದಲಾದರೂ ಮೂಲ ಅರ್ಥವನ್ನೇ ಉಳಿಸಿಕೊಂಡು ಬಂದಿದೆ. ಇದಕ್ಕೆ ಪುಷ್ಠಿಯಾಗಿ 'ಬೆಂಗಳೂರು' ಎಂದಿದ್ದ ಬೆಂಗಳೂರಿನ ಪದವನ್ನು ತಮಿಳು ಶಾನದಲ್ಲಿ 'ವೆಂಗಳೂರು' ಎಂದು ಬರೆದಿರುವುದು ಗಮನಿಸಿದಾಗ ತಿಳಿಯುತ್ತದೆ. 'ಬ' ಮತ್ತು 'ವ'ಕಾರದ ಸ್ಥಾನಪಲ್ಲಟ ಹೇಗಾಯಿತು ಎಂಬುದು.

ಈ ರೀತಿ ಬೇಗೂರಿನ ಸ್ಥಳನಾಮ ನಿರಂತರ ಬದಲಾಗುತ್ತ ಬಂದಿದ್ದು. ಬೆಂಪೂರು>ವೆಪ್ಪೂರು>ಬೇಹೂರು>ಬೇಗೂರು ಎಂದು ವಿಕಾಸ ಹೊಂದುತ್ತ ಬಂದಿದೆ. ಜನರು ತಮ್ಮ ಸೌಲಭ್ಯಕಾಂಕ್ಷೆಯಿಂದ ಊರಿನ ಹೆಸರನ್ನು ವೇಗವಾಗಿ ಉಚ್ಛರಿಸಿದ ಪರಿಣಾಮದಿಂದಲೇ

ಬೇಹೂರು>ಬೇಗೂರು ಆಗಿದೆ ಎಂದು ತಿಳಿಯಬಹುದು. ಇತ್ತೀಚೆಗೆ ಇಲ್ಲಿನ ಜಾತ್ರೆಯ ಕರಪತ್ರದಲ್ಲಿ 'ನಿಂಬಾಪುರಿ ಭಾಸ್ಕರಕ್ಷೇತ್ರ' ಎಂದು ಮುದ್ರಿಸಲಾಗಿದ್ದು ಅದರ ಬಗ್ಗೆ ವಿವರಣೆ ಪಡೆದಾಗ 'ನಿಂಬಾ' ಎಂದರೆ ಸಂಸ್ಕೃತದಲ್ಲಿ ಬೇವು ಎಂದರ್ಥ. ಆದ್ದರಿಂದ ಮೊದಲಿನಿಂದಲೂ ಬೇವಿನ ಮರಗಳು ಅಧಿಕವಾದ್ದರಿಂದ ಈ ಊರಿಗೆ ಸಂಸ್ಕೃತದಲ್ಲಿ 'ನಿಂಬಾಪುರಿ' ಎಂದು ಕರೆಯಲಾಗುತ್ತದೆ ಹಾಗೂ ಇಲ್ಲಿನ ಪ್ರಸಿದ್ಧ ನಾಗೇಶ್ವರ ದೇವಾಲಯದ ಬಾಗಿಲು ಪೂರ್ವಕ್ಕಿದ್ದು ಸೂರ್ಯ ಉದಯವಾಗುವ ಕಡೆಯಾದ್ದರಿಂದ 'ಭಾಸ್ಕರಕ್ಷೇತ್ರ' ಎಂತಲೂ ಕರೆಯುತ್ತಾರೆ. ಈ ದೇವಾಲಯದಲ್ಲಿ ಅದರ ಪ್ರತೀಕವಾಗಿ ಅಷ್ಟದಿಕ್ಪಾಲಕರ ಸಾಲಿನಲ್ಲಿ ಸೂರ್ಯನ ಮೂರ್ತಿಯನ್ನು ಕಾಣಬಹುದು ಎಂಬ ಪ್ರತಿಕ್ರಿಯೆ ಬಂದಿದೆ. ಆದರೆ 'ನಿಂಬಾಪುರಿ' ಎಂಬ ಪದ ಪ್ರಯೋಗದಿಂದ ಮೂಲಾರ್ಥವನ್ನು ಸೂಚಿಸುತ್ತದೆಯಾದರೂ ಇಲ್ಲಿ ಜನಪದೀಯರಿಗಾರಿಗೂ ಈ ಊರು 'ನಿಂಬಾಪುರಿ' ಎಂದು ಖ್ಯಾತಿ ಪಡೆದಿತ್ತು ಎಂಬುದರ ಬಗ್ಗೆ ಅರಿವಿಲ್ಲ. ಹಾಗೂ ಯಾವುದೇ ಶಾಸನದಲ್ಲೂ ಪ್ರಯೋಗಿಸಿಲ್ಲ. ಆದ್ದರಿಂದ ಸಂಸ್ಕೃತ ಬಲ್ಲವರು ಆ ರೀತಿ ಕರಪತ್ರದಲ್ಲಿ 'ಬೆಂಪೂರು' ಎಂಬ ಪದವನ್ನು ಅನುವಾದಿಸಿದ್ದಾರೆ ಎಂಬ ನಿರ್ಧಾರಕ್ಕೆ ಬರಬಹುದು. ಐತಿಹಾಸಿಕವಾಗಿ ಸಾಮಾಜಿಕವಾಗಿ ಇಲ್ಲಿನ ಆಚರಣೆಗಳು, ಸಂಪ್ರದಾಯಗಳು ತನ್ನದೇ ಆದ ವಿಶೇಷತೆ ಪಡೆಯುವುದರೊಂದಿಗೆ ಸಾಂಸ್ಕೃತಿಕವಾಗಿ ಮಹತ್ವವೆನಿಸಿದೆ.

**ಪೂವಿನಪುಲ್ಲಿ ಮಜ್ಗಲ:-**

ಬೆಂಪೂರು-೧೨ ಭಾಗಕ್ಕೆ ಒಳಪಟ್ಟಿದ್ದ ಪ್ರದೇಶಗಳಲ್ಲಿ ಇದು ಸಹ ಒಂದು. ಗಂಗರ ಆಳ್ವಿಕೆಗೆ ಒಳಪಟ್ಟಿದ್ದ ಪ್ರದೇಶವಾದ ಈ ಊರು. ಪ್ರಾಚೀನ ಕಾಲದಲ್ಲಿ 'ಪೂವಿನಪುಲ್ಲಿಮಜ್ಗಲ' ಎಂದು ಕರೆದಿರುವುದನ್ನು ಶಾಸನದಲ್ಲಿ ಕಾಣಬಹುದು. ಈ ಹೆಸರು ಹೇಗೆ ಬಂತು ಎಂದು ವಿಚಾರಿಸಿದಾಗ ಈ ಪ್ರದೇಶ ಹೂವನ್ನು ಬೆಳೆಯುವುದಕ್ಕೆ ಪ್ರಸಿದ್ಧಿ ಪಡೆದ ಪ್ರದೇಶವಾಗಿದ್ದರಿಂದ ಬಂದಿದೆ ಎಂಬ ಉತ್ತರ ಸಿಗುತ್ತದೆ. ಭಾಷಾಶಾಸ್ತ್ರದ ನೆಲೆಯಲ್ಲಿ ಪರಿಗಣಿಸಿದಾಗ 'ಪೂವು' ಮತ್ತು 'ಪುಲ್ಲಿ' ಎಂಬ ಪದಗಳ ಹೂವಿನ ಅರ್ಥವನ್ನು ಕೊಡುತ್ತದೆ. 'ಮಜ್ಗಲ' ಎಂದರೆ ಜನರು ವಾಸಮಾಡುವ ಪ್ರದೇಶ ಎಂದು ತಿಳಿಯಬಹುದು. ಪ್ರಾಚೀನ ಕಾಲದಲ್ಲಿ ಊರನ್ನು ಸೂಚಿಸಲು ವಿಶೇಷಣದ ಹಿಂದೆ ಈ ರೀತಿ 'ಮಂಗಲ' ಎಂಬ ಪದಪ್ರಯೋಗ ಸಾಮಾನ್ಯವಾಗಿತ್ತು.

ಇಂದು 'ಪೂವಿನಪುಲ್ಲಿಮಜ್ಗಲ', 'ಹುಲಿಮಂಗಲ' ಎಂಬ ಹೆಸರಿನಿಂದ ಪ್ರಸಿದ್ಧಿಯಾಗಿದೆ. ಪ್ರಾಚೀನ ರೂಪದ 'ಪೂವಿನ' ಎಂಬ ಪದ ಬಿಟ್ಟು ಹೋಗಿದ್ದು ಕಾಲಾಂತರದಲ್ಲಿ 'ಪುಲ್ಲಿಮಜ್ಗಲ'ಎಂದು ಕರೆದಿರಬೇಕು. ಜನರ ಬಾಯಲ್ಲಿ ಉಚ್ಛಾರ ದೋಷದಿಂದ 'ಹುಲಿಮಂಗಲ' ಎಂದು ರೂಪಾಂತರಗೊಂಡು ಆಭಾಸವಾಗಿರುವುದನ್ನು ಕಾಣಬಹುದು. ಇಂದು 'ಹುಲಿ' ಎಂಬುದು ಸಾಂಕೇತಿಕವಾಗಿ ಪ್ರಾಣಿಯನ್ನು

ಸೂಚಿಸುವಂತಾಗಿದೆ. ಒಟ್ಟಾರೆ ಕೆಲವು ಐತಿಹಾಸಿಕ ಊರುಗಳು ಕಾಲದ ದವಡೆಗೆ ಸಿಕ್ಕಿ ಜನರ ಉಚ್ಛಾರಣಾದೋಷದಿಂದ ಈ ರೀತಿ ಸಂಭವಸಿರಬಹುದು ಎಂಬುದಕ್ಕೆ ನಿದರ್ಶನವಾಗಿ ಕಾಣುತ್ತದೆ.

**ಹುಸ್ಕೂರು:-**

ನಮ್ಮ ಪೂರ್ವಿಕರೂ ಕೆಲವು ಊರುಗಳನ್ನು ಸೂಚಿಸಲು, ಪ್ರಾಕೃತಿಕ ಹಿನ್ನೆಲೆಯನ್ನು ಬಳಸಿಕೊಂಡಿರುವುದುಂಟು. ಅಂತಹ ಪ್ರಯತ್ನ ಈ ಹುಸ್ಕೂರು ಗ್ರಾಮಕ್ಕೆ ಸೇರಿದ್ದಾಗಿದೆ. ಈ ಊರು ಹಿಂದೆ ಮರಳಿನಿಂದ ಆವೃತವಾಗಿದ್ದ ಪ್ರದೇಶವಾಗಿತ್ತು. ಕಾಲಾಂತರದಲ್ಲಿ ಅಲ್ಲಿಗೆ ಜನರು ಬಂದು ಗ್ರಾಮವನ್ನು ಕಟ್ಟಿಕೊಂಡು ವಾಸಿಸತೊಡಗಿದರು. ಆ ಕಾರಣದಿಂದ 'ಉಸುಕು' ತುಂಬಿದ ಊರಾದ್ದರಿಂದ 'ಉಸುಕುಊರು'. ಕಾಲಾಂತರದಲ್ಲಿ ಹುಸ್ಕೂರು ಎಂದಾಗಿದೆ. ಭಾಷಿಕ ಹಿನ್ನೆಲೆಯಲ್ಲಿ 'ಉ'ಕಾರ ಸ್ವರ ಲೋಪಗೊಂಡು 'ಹು'ಕಾರ ವ್ಯಂಜನ ಆಗಮವಾಗಿದೆ. ಈ ಗ್ರಾಮದ ಬಗ್ಗೆ ಒಂದು ಐತಿಹಾಸಿಕ ಕತೆ ಇದೆ. ಮೈಸೂರು ಸಂಸ್ಥಾನದ ಹೈದರಾಲಿ ಟಿಪ್ಪುಸುಲ್ತಾನ ಇಲ್ಲಿನ ಪ್ರಾಂತ್ಯಗಳ ಮೇಲೆ ದಂಡೆತ್ತಿ ಬರುತ್ತಿದ್ದನಂತೆ. ಹಾಗೆ ಬಂದಾಗ ಸೈನಿಕರ ಜೊತೆ ಹುಸ್ಕೂರು ಮದ್ದೂರಮ್ಮನ ದೇವಾಲಯದ ಬಳಿ ತಂಗಿದ್ದರು. ಆ ಸಮಯಕ್ಕೆ ಮಳೆಗಾಲವಾಗಿದ್ದರಿಂದ ಮಿಂಚು-ಗುಡುಗಿನ ಮಳೆಯೂ ಸುರಿಯಲಾರಂಭಿಸಿತು. ಟಿಪ್ಪು ಮತ್ತು ಸೈನಿಕರು ಚಪ್ಪಲಿ ಸಮೇತರಾಗಿ ದೇವಸ್ಥಾನದ ಒಳಗೆ ಪ್ರವೇಶ ಮಾಡಿದರಂತೆ. ಇದರಿಂದ ಕೋಪಗೊಂಡ ದೇವಿ ಬೆಳಗಿನ ವೇಳೆಗೆ ಎಲ್ಲರಿಗೂ ವಿಪರೀತ ವಾಂತಿ-ಭೇದಿಗಳಿಂದ ಸುಸ್ತಾಗುವಂತೆ ಮಾಡಿದಳು. ಇದೆಲ್ಲಾ ದೇವಿಯ ಮಹಿಮೆ ಎಂದು ಮನಗಂಡ ಟಿಪ್ಪು ಎಲ್ಲರಿಗೂ ಕಾಯಿಲೆ ವಾಸಿಯಾದರೆ ವಜ್ರದ ಒಡವೆ ಮಾಡಿಸುವುದಾಗಿ ದೇವರಲ್ಲಿ ಬೇಡಿಕೊಂಡನಂತೆ. ಅದರಂತೆ ದೇವಿಯ ಅನುಗ್ರಹದಿಂದ ಅವರಿಗೆಲ್ಲ ಕಾಯಿಲೆ ವಾಸಿಯಾಯಿತು ಮತ್ತು ಶತ್ರುಗಳ ವಿರುದ್ಧ ಜಯವು ಲಭಿಸಿತು. ಇದರ ನೆನಪಿಗಾಗಿ ಹರಿಕೆಯಂತೆ ದೇವಿಗೆ ವಜ್ರಖಚಿತವಾದ ಆಭರಣಗಳನ್ನು ನೀಡಿದನು. ಈಗಲೂ ಸಹ ವಜ್ರದ ಒಡವೆ ಆನೇಕಲ್ ತಾಲ್ಲೂಕು ಕಛೇರಿಯಲ್ಲಿ ತಹಸೀಲ್ದಾರರ ಸನ್ನಿಧಿಯಲ್ಲಿದೆ. ಮೂರು ವರ್ಷಗಳಿಗೊಮ್ಮೆ ಜಾತ್ರೆಗೆ ತಂದು ದೇವಿಗೆ ಸಿಂಗರಿಸಿ ಮತ್ತೆ ಅದನ್ನು ಕೊಂಡೊಯ್ಯುತ್ತಾರೆ. ರಕ್ಷಣೆ ದೃಷ್ಟಿಯಿಂದ ಇತ್ತೀಚೆಗೆ ವಜ್ರದ ಒಡವೆಗಳನ್ನು ತರುತ್ತಿಲ್ಲ. ಈ ಊರಿನಲ್ಲಿ ಮದ್ದೂರಮ್ಮ ದೇವಾಲಯ ಹಲವು ಬಾರಿ ಜೀರ್ಣೋದ್ಧಾರಗೊಂಡಿದೆ. ವಿಜಯನಗರ ಅರಸರ ಕಾಲದಲ್ಲಿ ಬೇಗೂರು ಮಾಂಡಲಿಕರಿಂದ ಈ ಊರು ಆಳ್ವಿಕೆಗೆ ಒಳಪಟ್ಟಿತು. ಮದ್ದೂರಮ್ಮ ದೇವಾಲಯದ ಎದುರಿಗೆ ಒಂದು ಸುಂದರವಾದ ಕಲ್ಲಿನರಥವನ್ನು ಈಗಲೂ ಕಾಣಬಹುದು. ದೇವಾಲಯದ ಹಿಂದೆ ಸುಂದರವಾದ ಕಲ್ಯಾಣಿ ಇದೆ. ವರ್ಷಕ್ಕೊಮ್ಮೆ ನಡೆಯುವ ಮದ್ದೂರಮ್ಮ ಜಾತ್ರೆ ಹೆಚ್ಚು ಪ್ರಸಿದ್ಧಿಯಾಗಿದೆ.

**ರಾಜಾಪುರ:–**

ಶ್ರೀರಾಜೇಶ್ವರಿ ಶಿವಾಚಾರ್ಯರು ತಮಿಳುನಾಡಿನ ಹೊಸೂರು ಬಳಿಯ ಶ್ರೀಚೂಡೇಶ್ವರಸ್ವಾಮಿ ಬೆಟ್ಟದ ಕ್ಷೇತ್ರದಲ್ಲಿ ತಪಸ್ಸು ಆಚರಿಸುತ್ತಿದ್ದರು. ಅಲ್ಲಿನ ರಾಜ ಚೂಡೇಶ್ವರ ದೇವಾಲಯದ ರಾಜಗೋಪುರವನ್ನು ನಿರ್ಮಾಣ ಮಾಡುವಾಗ ಅದು ಪದೇ ಪದೇ ಬೀಳತೊಡಗಿತು. ಆಗ ರಾಜನು ಶ್ರೀಗಳ ಮಾರ್ಗದರ್ಶನದಲ್ಲಿ ರಾಜಾಪುರ ವೀರಧರ್ಮ ಸಿಂಹಾಸನ ಮಠದಲ್ಲಿ ವಿಶಾಲವಾದ ಹಜಾರವನ್ನು ಒಂದೇ ರಾತ್ರಿ–ಹಗಲಿನಲ್ಲಿ ೪೮ ಅಂಕಟಮಠ ಕಟ್ಟಿಸಿದಾಗ ಗೋಪುರ ಬೀಳುವುದು ನಿಂತಿತು. ಅಂದಿನಿಂದ ಶ್ರೀಗಳು ಮಠದ ಶಿಷ್ಯರಾಗಿ ನಡೆದುಕೊಂಡ ಕಾರಣದಿಂದ ಈ ಗ್ರಾಮಕ್ಕೆ ರಾಜೇಶ್ವರಪುರ, ರಾಜಪುರ ಕ್ರಮೇಣ ರಾಜಾಪುರವಾಯಿತೆಂದು ಹೇಳುತ್ತಾರೆ.

ರಾಜಾಪುರಮಠ ಇದೊಂದು ಪ್ರಾಚೀನ ವೀರಶೈವ ಕೇಂದ್ರ. ಈ ಮಠ ತನ್ನದೇ ಆದ ಭವ್ಯ ಪರಂಪರೆಯನ್ನು ಹೊಂದಿ ಕರ್ನಾಟಕ, ತಮಿಳುನಾಡು, ಆಂಧ್ರಪ್ರದೇಶದಲ್ಲಿ ಬಹಳ ಪ್ರಸಿದ್ಧಿಯನ್ನು ಪಡೆದಿದೆ. ಮಠದಲ್ಲಿ ಭಕ್ತಿ, ಜ್ಞಾನ, ಧರ್ಮ, ಸಾಹಿತ್ಯ, ದೀಕ್ಷೆ, ಬೋಧನೆ. ಭೈರವೇಶ್ವರ ಕಥಾಮಣಿಸೂತ್ರ ವೀರಶೈವ ಗ್ರಂಥಗಳು ಸೇರಿದಂತೆ ೬೪ ತಾಳೆಗರಿಗಳ ಗ್ರಂಥಗಳಿವೆ. 'ಭಾರತೀರುಕ್ಮಾಂಗ ಚರಿತೆ' ಮುಂತಾದ ಗ್ರಂಥಗಳನ್ನು ಬರೆದ ಲಕ್ಷ್ಮಣ ಕವಿ ಮಠದ ಆಶ್ರಯ ಪಡೆದಿದ್ದರು. 'ಶಿವತತ್ವಚಿಂತಾಮಣಿ' ಕರ್ತನಾದ ದಂಡೇಶನು ಮಠದ ಪ್ರಭಾವಕ್ಕೆ ಒಳಗಾಗಿದ್ದನು. ಇಲ್ಲಿನ ಧಾರ್ಮಿಕ ಚಟುವಟಿಕೆಗಳು ಬಹಳ ಜನಪ್ರಿಯವಾಗಿದ್ದು, ಪ್ರತಿವರ್ಷ ಶ್ರಾವಣ, ಕಾರ್ತೀಕ, ಧನುರ್ಮಾಸ ಪೂಜೆಗಳು ವಿಶೇಷವಾಗಿ ನಡೆಯುತ್ತವೆ. ಈ ಸಂಸ್ಥಾನಕ್ಕೆ ೧೮೦೦ ಎಕರೆ ಜಮೀನನ್ನು ಹಿಂದಿನ ರಾಜ ಮಹಾರಾಜರುಗಳು ದಾನವಾಗಿ ನೀಡಿದ್ದು, ಇಲ್ಲಿನ ರೈತರು ಸಾಗುವಳಿ ಮಾಡುತ್ತಿದ್ದಾರೆ. ಈಗ ಕೇವಲ ೮೦ ಎಕರೆ ಜಮೀನು ಮಠದ ಹೆಸರಿನಲ್ಲಿದ್ದು ಉಳಿದ ಜಮೀನು ಬಡರೈತರ ವ್ಯವಸಾಯಕ್ಕೆ ಬಿಟ್ಟುಕೊಡಲಾಗಿದೆ. ಹೀಗಾಗಿ ರಾಜಾಪುರಕ್ಕೆ ಚಾರಿತ್ರಿಕ ಹಿನ್ನೆಲೆ ಇದೆ. ಹಾಗೂ ಈ ಪ್ರದೇಶವು ಕೂಡ ಗಂಗರ ಕಾಲದಲ್ಲಿ ಆಳ್ವಿಕೆಗೆ ಒಳಪಟ್ಟಿತು ಎಂದು ಹೇಳಬಹುದು. ಇಲ್ಲಿ ಗಂಗರ ಕಾಲದ ಒಂದು ಶಾಸನವನ್ನು ಕಾಣಬಹುದು.

**ಬನ್ನೇರುಘಟ್ಟ:–**

ಈ ಗ್ರಾಮಕ್ಕೆ ಹೆಸರು ಪ್ರಾಕೃತಿಕ ಹಿನ್ನೆಲೆಯಿಂದ ಬಂದಂತಹದ್ದಾಗಿದೆ. ಇದು ಕಾಡಿನಿಂದ ಆವೃತವಾಗಿರುವ ಪ್ರದೇಶವಾಗಿದ್ದರಿಂದ 'ಬನ್ನೇರುಘಟ್ಟ' ಎಂಬ ಹೆಸರು ಬಂದಿದೆ. ತಮಿಳು ದಾಖಲೆಗಳಲ್ಲಿ 'ವನ್ನಿರಾರ ಘಟ್ಟ'ವೆಂದು ಕರೆದಿರುವುದು, ಬೇರೆ ದಾಖಲೆಗಳಲ್ಲಿ 'ವರವಾರಾಜಪುರ' ಎಂತಲೂ 'ಬನ್ನೂರುಘಟ್ಟ' ಎಂದೂ ಕೆಲವು ಕಾಲಗಳ ಹಿಂದೆ ಕರೆದಿರುವುದನ್ನೂ ಇಲ್ಲಿನ ಸ್ಥಳೀಯರು ಹೇಳುತ್ತಾರೆ. ಇದು ಪ್ರವಾಸಿ ಪ್ರೇಕ್ಷಣಿಯ ಐತಿಹಾಸಿಕ ಸ್ಥಳವಾಗಿದ್ದು, ಇಲ್ಲಿನ ಚಂಪಕಧಾಮಸ್ವಾಮಿ ದೇವಾಲಯ ಹೊಯ್ಸಳರಿಗೆ ಅಧೀನವಾಗಿತ್ತು. ವಹ್ನಿಗಿರಿಯ ತಪ್ಪಲಿನಲ್ಲಿರುವ ಈ ದೇವಾಲಯವನ್ನು ೧೦೦೦

ವರ್ಷಗಳ ಹಿಂದೆ ದಾಮೋದರ ಪೆರುಮಾಳ ಕಟ್ಟಿಸಿದನೆಂದು ಐತಿಹಾಸಿಕ ದಾಖಲೆಗಳು ಹೇಳುತ್ತವೆ. ಪೌರಾಣಿಕವಾಗಿ ಪಾಂಡವರು ಅಜ್ಞಾತವಾಸದಲ್ಲಿದ್ದಾಗ ಕಟ್ಟಿದರೆಂದು ಸಹ ಹೇಳಲಾಗುತ್ತಿದೆ. ವಹ್ನಿಗಿರಿಯ ತುದಿಯಲ್ಲಿ ಅರ್ಧಕ್ಕೆ ಕಟ್ಟಿನಿಂತಿರುವ ಕಟ್ಟಡ ಲಕ್ಷ್ಮೀನರಸಿಂಹಸ್ವಾಮಿ ದೇವಾಲಯ ಅಭಿಮನ್ಯುವಿನ ಪರೀಕ್ಷಿತ್ ಮಹಾರಾಜ ಕಟ್ಟಿದ ಪ್ರತೀತಿಯಿದೆ ಎಂದು ಇಲ್ಲಿನ ಸ್ಥಳೀಯರು ಅಭಿಪ್ರಾಯ ಪಡುತ್ತಾರೆ. ದ್ವಾಪರ ಯುಗದಲ್ಲಿ ಈ ಕ್ಷೇತ್ರದಲ್ಲಿನ ನಾರಾಯಣ ಎಂಬ ಮಹಾಋಷಿಯು ತಪಸ್ಸಿಗೆ ಭಂಗ ತಂದ ಚಂಪಕಳೆಂಬ ರಾಕ್ಷಸಿಯ ಸಂಹಾರಕ್ಕೆ ಮುನಿಶ್ರೇಷ್ಠರ ಯಾವ ಮಹಾಮಂತ್ರವು ಉಪಯೋಗಕ್ಕೆ ಬಾರದಿದ್ದಾಗ ಶ್ರೀರಾಮ ಮಹಾಮಂತ್ರವನ್ನು ಪ್ರಯೋಗಿಸಲಾಯಿತು. ಆಗ ರಾಕ್ಷಸಿ ಚಂಪಕಳು ಮೃತಪಟ್ಟಳೆಂದು ಅಂದಿನಿಂದ ಸ್ವಾಮಿಗೆ ಚಂಪಕಧಾಮಸ್ವಾಮಿ ಎಂಬ ಹೆಸರು ಬಂತೆಂಬ ಪೌರಾಣಿಕ ಕತೆಯನ್ನು ಇಲ್ಲಿನ ಹಿರಿಯರು ಹೇಳುತ್ತಾರೆ. ಮತ್ತೊಂದು ವಾದದ ಪ್ರಕಾರ ಚಂಪಕ ಮರಗಳು (ಸಂಪಂಗಿಮರ)ದೇವಾಲಯದ ಸುತ್ತಮುತ್ತಲೂ ಇದ್ದುದರಿಂದ ಚಂಪಕಧಾಮಸ್ವಾಮಿ ದೇವಾಲಯವೆಂದು ಕರೆಯುವುದುಂಟು. ಮೈಸೂರು ದಸರಾ ಹಬ್ಬದ ಆಚರಣೆಯ ಹಿನ್ನೆಲೆಯಲ್ಲಿ ಇಲ್ಲಿನ ನಾಡಹಬ್ಬ ದಸರಾವನ್ನು ಆಚರಿಸುವುದು ವೈಶಿಷ್ಟ್ಯವಾಗಿದೆ. ಅಲ್ಲದೇ ಆನೆಯ ಮೇಲೆ ದೇವರ ಮೆರವಣಿಗೆ ಮಾಡುವುದು ವಿಶೇಷ. ಇಲ್ಲಿ ಸುಂದರವಾದ ಬೆಟ್ಟ, ಪ್ರಸಿದ್ಧವಾದ ಚಂಪಕಧಾಮಸ್ವಾಮಿ ದೇವಾಲಯ ಹಾಗೂ ರಾಷ್ಟ್ರೀಯ ವನ್ಯಧಾಮವಿರುವುದರಿಂದ ಪ್ರೇಕ್ಷಣೀಯ ಸ್ಥಳವಾಗಿದ್ದು ಪ್ರವಾಸಿಗರನ್ನು ಕೈಬೀಸಿ ಕರೆಯುತ್ತದೆ.

**ಹುಳಿಮಾವು :-**

ಈ ಊರು ಸಹ ಪ್ರಾಕೃತಿಕ ವಿಶೇಷತೆಯಿಂದ ಬಂದಂತಹದ್ದಾಗಿದೆ. ಈ ಪ್ರದೇಶದಲ್ಲಿ ಅತೀಯಾದ ಮಾವಿನಮರಗಳನ್ನು ಮೊದಲು ಬೆಳೆಯುತ್ತಿದ್ದರಂತೆ. ಅದರ ಆಧಾರವಾಗಿಯೇ ಹುಳಿಯ +ಮಾವು =ಹುಳಿಮಾವು ಎಂದು ಜನರ ಬಾಯಲ್ಲಿ ರೂಡಿಗೆ ಬಂದಿದೆ. ಚಾರಿತ್ರಿಕವಾಗಿ ಪ್ರಸಿದ್ಧ ಸ್ಥಳವಾಗಿರುವ ಇದು ಪ್ರಸಿದ್ಧವಾದ 'ಮೀನಾಕ್ಷಿಸುಂದರೇಶ್ವರ' ದೇವಾಲಯವನ್ನು ಹೊಂದಿದೆ. ಈ ದೇವಾಲಯ ತಮಿಳುನಾಡಿನ ಮಧುರೆಯ ಮೀನಾಕ್ಷಿ ದೇವಾಲಯದ ಪ್ರತಿರೂಪದಂತಿದೆ. ಇಲ್ಲಿ ಜೋಡಿ ದೇವಾಲಯಗಳಿದ್ದು ಸುಂದರೇಶ್ವರ ಮತ್ತು ಮೀನಾಕ್ಷಿ ಅಮ್ಮನವರ ಗುಡಿಗಳಿವೆ. ಮಹಾದ್ವಾರದ ರಾಯಗೋಪುರವು ಉನ್ನತವಾಗಿದ್ದು ಆಕರ್ಷಣೀಯವಾಗಿದೆ. ಒಟ್ಟಾರೆ ದೇವಾಲಯ ಸುಂದರವಾಗಿ ಭವ್ಯತೆಯಿಂದ ಕೂಡಿದೆ.

ಈ ಊರಿನಲ್ಲಿಯೇ ಏಕಶಿಲೆಯಿಂದ ನಿರ್ಮಿಸಲಾಗಿರುವ ಗುಹಾಂತರ ದೇವಾಲಯವಿದೆ. ಹಿಂದೆ ಇದು ಆದಿಮಾನವರ ತಾಣವಾಗಿತ್ತೆಂದು ಎಸ್.ಆರ್.ರಾವ್ ಹೇಳುತ್ತಾರೆ. ಯಜ್ಞಯಾಗಾದಿಗಳು ಆಗಿರಬಹುದಾದ ಕುರುಹಾಗಿ ಬಹಳಷ್ಟು ಬೂದಿ ಸಿಕ್ಕಿದೆ. ಪ್ರಾಗೈತಿಹಾಸಿಕ ಕಾಲಕ್ಕೆ ಇತಿಹಾಸ ಸರಿಯುತ್ತದೆ. ಈ ಬೃಹತ್ ಏಕಶಿಲಾಗುಹೆ ಸುಮಾರು ೨೦೦ X ೩೦೦ಅಡಿ ವಿಶಾಲವಾಗಿದೆ. ೧೦ ಅಡಿ ಎತ್ತರವಿದೆ.

ಧೌಮ್ಯಮುನಿಗಳು ವಾಸವಾಗಿದ್ದ ಸಮಾಧಿಯಾದ ಸ್ಥಳ ಎನ್ನುತ್ತಾರೆ. ರಾಮಾನಂದ ಸ್ವಾಮಿಗಳು ಶುದ್ಧಿಕರಿಸಿ ದೈವಸ್ಥಾಪಿಸಿ ಆಲಯವಾಗಿಸಿದ್ದಾರೆ. ಗುಹಾಲಯದ ಒಳಗೆ ಹೋಗಲು ಎತ್ತರವಾದ ದ್ವಾರವಿದೆ. ರಾಮಾನಂದರು ಜೀವಂತ ಸಮಾಧಿಯಾದ ಕತೆಯಿದೆ. ಅವರ ಶಿಷ್ಯರು ಮರಿಯಪ್ಪ ಸ್ವಾಮಿಗಳು ಈಗ ನಿರ್ವಹಿಸುತ್ತಿದ್ದಾರೆ. ಗುಹಾಲಯದ ಮೇಲೆ ಪಾದಚಿತ್ರವನ್ನು ಕೆತ್ತಲಾಗಿದ್ದು, ಈ ಪಾದ ಭೀಮನದು ಎಂದು ಜನರು ನಂಬುತ್ತಾರೆ.

ಈ ಎಲ್ಲಾ ಊರುಗಳ ಸ್ಥಳನಾಮಗಳನ್ನು ಗಮನಿಸಿದಾಗ ಸಾಮಾನ್ಯ ನಾಮಗಳಿಗೆ ಕೊಡಬೇಕಾದ ಪ್ರಾಧಾನ್ಯಕ್ಕಿಂತ ಹೆಚ್ಚು ಪ್ರಾಮುಖ್ಯತೆ ಕೊಡಬೇಕಾಗಿದೆ. ನಮ್ಮ ಪೂರ್ವಿಕರ ವಿದ್ಯಾಸಂಪನ್ನತೆ, ಸೌಂದರ್ಯಪ್ರಜ್ಞೆ, ಧಾರ್ಮಿಕದೃಷ್ಟಿ, ಮೂಢನಂಬಿಕೆಗಳು ಆಳರಸರ ಹಾಗೂ ಮೂಲನಿವಾಸಿಗಳ ಬಗ್ಗೆ ಮಹತ್ವದ ವಿಚಾರಗಳು ಅಂದಿನ ವೃತ್ತಿ, ನೈಸರ್ಗಿಕ ಸಂಪತ್ತು, ಮಾನವಶಾಸ್ತ್ರ ಮುಂತಾದ ಅನೇಕ ವಿಷಯಗಳನ್ನು ಗರ್ಭದಲ್ಲಿ ಅಡಗಿಸಿಕೊಂಡಿರುವ ಈ ಸ್ಥಳನಾಮಗಳು ಅನುಲ್ಲೇಖಿತ ಗ್ರಂಥಗಳಾಗಿವೆ. ಹಾಗಾಗಿ ಸ್ಥಳನಾಮ ಹೆಚ್ಚಾಗಿ ಭಾಷೆಗೆ ಸಂಬಂಧಪಟ್ಟ ವಿಷಯವಾದರೂ, ಪ್ರಾಚೀನ ಸಂಸ್ಕೃತಿಗಳನ್ನು ಪುನರ್ ರಚಿಸುವಲ್ಲಿ ಶಾಸನ, ಕಾವ್ಯಗಳಂತೆ, ಸ್ಥಳನಾಮಗಳೂ ಕೂಡ ಮಹತ್ವಪೂರ್ಣ ಸಹಾಯಕ ಸಾಮಾಗ್ರಿಗಳಾಗಿರುವುದನ್ನು ಕಾಣಬಹುದು. ಇವುಗಳ ಶಾಸ್ತ್ರೀಯ ಅಧ್ಯಯನದಿಂದ ಅನೇಕ ಚಾರಿತ್ರಿಕ, ಧಾರ್ಮಿಕ, ಸಾಮಾಜಿಕ ವಿಷಯಗಳು ತಿಳಿದುಬರುತ್ತದೆ. ಆದುದರಿಂದ ಭಾಷಾಶಾಸ್ತ್ರದ ದೃಷ್ಟಿಯಿಂದ ಮಾತ್ರವಲ್ಲದೇ ಎಲ್ಲಾ ದೃಷ್ಟಿಯಿಂದಲೂ ಇಂತಹ ಅಧ್ಯಯನ ಅವಶ್ಯಕತೆಯಿದೆ.

ಸ್ಥಳನಾಮಗಳು ಆಯಾ ಸ್ಥಳಗಳ ಪೂರಕವಾಗುವಂತಹ ಮಾಹಿತಿಗಳನ್ನು ಒದಗಿಸುವಂತೆಯೇ, ಸಾಮಾಜಿಕ ಸ್ಥಿತಿ-ಗತಿಗಳನ್ನು ವಿವರಿಸಲು ಸ್ಥಳನಾಮಗಳು ಸಹಾಯಕವಾಗಿವೆ. ಹಾಗೆಯೇ ಧರ್ಮ, ಮತ, ಜಾತಿ, ವೃತ್ತಿ ಇಲ್ಲವೇ ದೇವತೆಗಳ ಹೆಸರನ್ನು ಸೂಚಿಸುವ ಸ್ಥಳನಾಮಗಳು ಆ ಪ್ರದೇಶಗಳ ಧಾರ್ಮಿಕ ನಂಬಿಕೆಗಳ ಬಗೆಗೆ ವಿಶ್ವಾಸನೀಯ ಮಾಹಿತಿಗಳನ್ನು ಸಂಗ್ರಹಿಸಿಕೊಡುತ್ತವೆ. ಆದ್ದರಿಂದ ಬೇಗೂರು ಕ್ಷೇತ್ರದ ಕೆಲವು ಮಹತ್ವಯುತವಾದ ಸ್ಥಳಗಳ ಅಧ್ಯಯನ ಅರ್ಥಪೂರ್ಣವಾಗಿದ್ದು, ಸಾಂಸ್ಕೃತಿಕವಾಗಿ ಮಹತ್ವಯುತವಾದದ್ದಾಗಿದೆ.

# ಅಧ್ಯಾಯ – ೩

## ನಾಗೇಶ್ವರ ದೇವಾಲಯದ ಪ್ರಾಮುಖ್ಯತೆ ಹಾಗೂ ವೈಶಿಷ್ಟ್ಯ

ಜನರ ಧಾರ್ಮಿಕ ರೀತಿನೀತಿಗಳಿಗೆ ಸಾಕ್ಷಿಯಾಗಿರುವ ದೇವಾಲಯಗಳ ಶಿಲ್ಪಕಲೆಗಳು ಇಲ್ಲಿಯ ಸಂಸ್ಕೃತಿಗೆ ಹಿಡಿದಿರುವ ಕೈಗನ್ನಡಿಯಾಗಿದೆ. ಬೆಂಗಳೂರು ಸುಮಾರು ೨೦೦೦ ವರ್ಷಗಳಿಂದಲೂ ಜನನಿಬಿಡ ಪ್ರದೇಶವಾಗಿರುವುದನ್ನು ಗಮನಿಸಬಹುದು. ಹಾಗೆಯೇ ಬೆಂಗಳೂರು ದಕ್ಷಿಣಕ್ಕೆ ಇರುವ ಬೇಗೂರು ಸಹ ಈ ವಾಸ್ತುಶಿಲ್ಪದ ದೃಷ್ಟಿಯಿಂದ ಪ್ರಾಮುಖ್ಯತೆ ಪಡೆದಿದೆ.

ದೇವಾಲಯಗಳ ನಿರ್ಮಾಣವು ಇತ್ತೀಚಿನದಲ್ಲ. ಅದು ಆದಿಕಾಲದಿಂದಲೂ ಬೆಳೆದುಬಂದ ಒಂದು ಮಹತ್ವದ ಸಂಸ್ಕೃತಿ. ಆದಿಮಾನವ ತನ್ನ ಜೀವನಕ್ರಮದಲ್ಲಿ ಪರಿಸರದಲ್ಲಿ ಆಗುತ್ತಿದ್ದ ವೈಪರೀತ್ಯಗಳನ್ನು ಗಮನಿಸಿ ಭಯಭೀತನಾಗಿ, ಆಶ್ಚರ್ಯಚಕಿತನಾಗಿ, ವಿನಮ್ರದಿಂದ ಪೂಜಿಸಲು ಪ್ರಾರಂಭ ಮಾಡಿದ. ಸುಡುವ ಬೆಂಕಿ, ಬೀಸುವಗಾಳಿ, ಹರಿಯುವನೀರು, ರಾತ್ರಿಹಗಲು ಎಲ್ಲವೂ ಸಹ ಒಂದು ಶಕ್ತಿಯ ಪ್ರೇರಣೆಯಂದೇ ಬಗೆದ, ಪ್ರಕೃತಿಯ ಮುಂದೆ ನಾನು ತುಂಬ ಸಣ್ಣವನು ಎಂಬ ಭಾವನೆಯೊಂದಿಗೆ ಅವುಗಳನ್ನು ಆರಾಧಿಸುತ್ತಾ ಬಂದ. ಆದರೆ ಆದಿಮಾನವನಿಗೆ ಪೂಜಾ ಬುದ್ಧಿಬೆಳೆದುದು ಅವನ ಅಜ್ಞಾನದಿಂದಷ್ಟೇ ಎನ್ನಲಾಗುವುದಿಲ್ಲ. ಅಪೂರ್ವವಾದುದರ, ಅದ್ಭುತವಾದುದರ ಎದುರು ನಿಂತಾಗ ಅವನಲ್ಲಿ ಒದಗಿಬಂದ ಉದಾತ್ತಭಾವನೆಗಳು ಕಾರಣ ಎನ್ನಬಹುದು.

ಮನುಷ್ಯನಿಗೆ ಅಪೂರ್ವ, ಅದ್ಭುತ ಎಂದೆನಿಸುವುದರ ಜೊತೆಗೆ ಅದರ ಪ್ರತಿಕೃತಿಯನ್ನು ಕಲ್ಪಿಸಿಕೊಳ್ಳುವ, ರೂಪಿಸುವ, ಸೃಜನಶಕ್ತಿಯೂ ಇದೆ. ನಿಸರ್ಗಸಿದ್ಧವಾದ ವಸ್ತುಗಳನ್ನು ಸಣ್ಣ ಪ್ರಮಾಣದಲ್ಲಿ ಕಲಾತ್ಮಕವಾಗಿ ಮಾಡಿಟ್ಟುಕೊಳ್ಳುವ ಹವ್ಯಾಸವು ನಿಸರ್ಗ ಸಿದ್ಧವಾದುದೆ. ಆ ಮೂಲಕ ತನ್ನ ಶ್ರದ್ಧೆಯನ್ನು ಬೆಳೆಸಿಕೊಳ್ಳುತ್ತ ಬಂದಿದ್ದಾನೆ. ಪ್ರೊ.ಎಸ್.ಕೆ.ರಾಮಚಂದ್ರರಾವ್ ಹೇಳುವಂತೆ "ಬೆಟ್ಟದ ಆಕಾರವನ್ನು ತಳೆದ ದೇಗುಲ, ಶಿಖರದಂತೆ ಕಾಣುವ ಗೋಪುರ, ಒಣಮರದ ಕೊಂಟೆಯನ್ನು ಹೋಲುವ ಲಿಂಗ ಇವೆಲ್ಲ ಹವ್ಯಾಸದ ಅಭಿವ್ಯಕ್ತಿಗಳೇ"[೧] ಎಂದಿದ್ದಾರೆ.

ಈ ರೀತಿ ಮನುಷ್ಯ ಹವ್ಯಾಸದ ಫಲವೇ ದೇವಾಲಯವೆಂದು ಹೇಳಿದರೂ ಸಹ ಒಬ್ಬೊಬ್ಬ ವಿದ್ವಾಂಸರು ಒಂದೊಂದು ರೀತಿಯಲ್ಲಿ ದೇವಾಲಯದ ಬೆಳವಣಿಗೆ ಬಗ್ಗೆ ಹೇಳಿರುವುದು ಗಮನಿಸಬಹುದು. ಆದರೂ ರಾಜಮಹಾರಾಜರು ಧಾರ್ಮಿಕ ಸಂಘಪರಿವಾರದವರ ಕಾಲದಲ್ಲಿ ದೇವಾಲಯಗಳ ಬೆಳವಣಿಗೆ ಅಧಿಕ ಪ್ರಮಾಣದಲ್ಲಿ ಬೆಳೆಯಿತು. ದೇವಾಲಯ ಪವಿತ್ರ ಹಾಗೂ ಮಹತ್ವತೆಯ ಪ್ರತೀಕವಾಗಿದ್ದು ಒಂದೊಂದು ಕಾಲಘಟ್ಟದಲ್ಲಿ, ಒಬ್ಬೊಬ್ಬ ರಾಜರ ಕಾಲದಲ್ಲಿಯೂ ತಮ್ಮದೇ ಆದ ವಾಸ್ತುಶಿಲ್ಪವನ್ನು ಮೆರೆದಿರುವುದು ಮುಖ್ಯವಾಗುತ್ತದೆ. ಕೆಲವರು ಬೌದ್ಧಧರ್ಮದ ಸ್ತೂಪಗಳೇ ದೇವಾಲಯದ ಬೆಳವಣಿಗೆಯ ಮೂಲ ಎಂದರೆ ಎಸ್.ಕೆ.ರಾಮಚಂದ್ರರಾವ್ ಸಮಾಧಿಗಳ ಹಿನ್ನೆಲೆಯಿಂದ

ಗುರುತಿಸಹೊರಟರು. ಏನೇ ಆದರೂ ಮನುಷ್ಯ ತನ್ನ ಕೆಲಸದ ಸ್ಫೂರ್ತಿಗಾಗಿ ತಾನೇ ಮಾಡಿಕೊಂಡ ಒಂದು ವ್ಯವಸ್ಥೆ ಎನ್ನಬಹುದು. "ಪಲ್ಲವ ರಾಜ ಮೊದಲನೆಯ ಮಹೇಂದ್ರವರ್ಮ(ಕ್ರಿಸ್ತಾಬ್ದ ೬೦೦-೬೩೦) ಒಂದು ಶಾಸನದ ಪ್ರಕಾರ ಈ ರಾಜನೇ ಕಲ್ಲು ಬಂಡೆಗಳನ್ನು ಕಡೆದು ಆಲಯವನ್ನು ರಚಿಸಿದವರಲ್ಲಿ ಮೊದಲಿಗನೆನ್ನುತ್ತಾರೆ. ದಕ್ಷಿಣ ಆರ್ಕಾಡು ಪ್ರದೇಶದಲ್ಲಿರುವ ಮಂದಗಪಟ್ಟ ಎಂಬಲ್ಲಿ ದೊರೆಯಿತ್ತಿರುವ ಶಾಸನವೊಂದು ಈ ರಾಜನನ್ನು ವಿಚಿತ್ರಚಿತ್ತನೆಂದು ಕರೆದು, ಇವನು ಇಟ್ಟಿಗೆ, ಮರ, ಗಾರೆ, ಲೋಹ ಯಾವುದನ್ನು ಬಳಸದೇ ಬ್ರಹ್ಮ, ವಿಷ್ಣು, ಶಿವರಿಗೆ ಆಯಾತನವೊಂದನ್ನು ನಿರ್ಮಿಸಿದನೆಂದು ವಿವರಿಸುತ್ತದೆ."[3] ಕಲ್ಲು ಬಂಡೆಗಳಲ್ಲಿ ಕೆತ್ತಿದ ಗುಡಿಯ ಕಾರ್ಯ ಇವನಿಂದಲೇ ಮೊದಲಾಯಿತು ಎಂದು ಹೇಳಿದರೂ ಸಹ ಇವನಿಗಿಂತ ಮೊದಲೇ ಈ ಕಾರ್ಯ ನಡೆದಿದೆ. ಕರ್ನಾಟಕ ಪ್ರಾಂತ್ಯದ ಬನವಾಸಿ, ತಾಳಗುಂದ ಮೊದಲಾದೆಡೆ ಇವನಿಗಿಂತ ಶತಮಾನಗಳ ಮೊದಲೇ ನಿರ್ಮಿತವಾದ ಶಿವಾಲಯಗಳು ಇರುವುದನ್ನು ಗಮನಿಸಬಹುದು.

ದೇವಾಲಯಗಳ ನಿರ್ಮಾಣದಲ್ಲಿ ಕಾಲ, ರಾಜರ ಅಪೇಕ್ಷೆ, ಶಿಲ್ಪಿಗಳು ಹಾಗೂ ಅಂದಿನ ಕಾಲದಲ್ಲಿ ಸಿಗುತ್ತಿದ್ದ ನೈಸರ್ಗಿಕ ಸಂಪತ್ತು ಮುಂತಾದವುಗಳ ಆಧಾರದ ಮೇಲೆ ದೇವಾಲಯದ ರಚನೆ ನಿರ್ಧಾರವಾಗುತ್ತಿತ್ತು. ದೇವಾಲಯದ ಶೈಲಿಗಳಲ್ಲಿ ವೇಸರ, ನಗರವೇಸರ, ದ್ರಾವಿಡಶೈಲಿಗಳನ್ನು ಕಾಣುವಂತೆ ಹೊಯ್ಸಳರು, ಗಂಗರು, ಶಾತವಾಹನರು, ಚೋಳರು, ಚಾಲುಕ್ಯರು ಮುಂತಾದ ರಾಜಮನೆತನಗಳ ಕಾಲದ ದೇವಾಲಯ ಶೈಲಿಗಳಲ್ಲಿ ವೈವಿಧ್ಯತೆಯನ್ನು ಕಾಣುತ್ತೇವೆ. ವಿಶೇಷವಾಗಿ ಹೊಯ್ಸಳರ ಕಾಲಕ್ಕೆ ಅಲ್ಲಿನ ಪರಿಸರದಲ್ಲಿ ಬಳಪದ ಕಲ್ಲಿನಿಂದ ಅತಿ ಸೂಕ್ಷ್ಮ ಕುಸುರಿಕೆಲಸ ಮಾಡಲು ಸಾಧ್ಯವಾಗುವುದರಿಂದ ಹೊಯ್ಸಳರ ಶಿಲ್ಪಕಲೆ ಹೆಚ್ಚು ಮಹತ್ವ ಪಡೆದಿದೆ.

ದಕ್ಷಿಣ ಭಾರತದಲ್ಲಿ ದ್ರಾವಿಡಶೈಲಿಯ ದೇವಾಲಯಗಳು ಅಧಿಕ ಪ್ರಮಾಣದಲ್ಲಿ ಕಂಡು ಬರುವುದನ್ನು ಕಾಣಬಹುದು. ಆದರೆ ವಿಶೇಷವಾಗಿ ಗಂಗರು ಅಧಿಕವಾಗಿ ಅವರದೇ ಆದ ಗಂಗರಶೈಲಿಯ ದೇವಾಲಯಗಳಲ್ಲಿಯೇ ವಿಶೇಷತೆಯನ್ನು ಕಂಡುಕೊಂಡಂತವರು. ಆದರೆ ಹೆಚ್ಚು ವಿದ್ವಾಂಸರು ಗಂಗರವಾಸ್ತು ಶಿಲ್ಪವನ್ನು ದ್ರಾವಿಡ ಶೈಲಿಯೆಂದು ಪರಿಗಣಿಸಿದರೆ ಡಾ.ದೇವರಕೊಂಡಾ ರೆಡ್ಡಿಯವರು ತುಂಬಾ ಸೂಕ್ಷ್ಮವಾಗಿ ಅಭ್ಯಸಿಸಿ ದ್ರಾವಿಡಶೈಲಿಯನ್ನು ಒಗ್ಗೂಡಿಸಿಕೊಂಡು ತಮ್ಮದೇ ಆದ ಒಂದು ವಾಸ್ತುಶಿಲ್ಪ ಸೃಷ್ಟಿಸಿದ್ದಾರೆಂದು ಹೇಳುವುದು ಗಮನಾರ್ಹ.

ಕ್ರಿ.ಶ.೫ನೇ ಶತಮಾನದಿಂದ ಕೋಲಾರವನ್ನು ರಾಜಧಾನಿಯಾಗಿ ಮಾಡಿಕೊಂಡು ಆಳಲು ಪ್ರಾರಂಭಿಸಿದ ಗಂಗರಾಜರು ಗಂಗವಾಡಿ ಪ್ರದೇಶಕ್ಕೆ ಬೆಂಗಳೂರು ಸೇರಿತ್ತು. ಸುಮಾರು ೬೫೦ ವರ್ಷಗಳ ಕಾಲ ದಕ್ಷಿಣಭಾರತದಲ್ಲಿ ಆಳ್ವಿಕೆಯನ್ನು ಮಾಡಿದ್ದು ಚಾಲುಕ್ಯ ಮತ್ತು ರಾಷ್ಟ್ರಕೂಟರ ಮಾಂಡಲೀಕತ್ವವನ್ನು ಒಪ್ಪಿಕೊಂಡರೂ ಸ್ವತಂತ್ರರಂತೆ ರಾಜ್ಯಭಾರ ಮಾಡಿದ್ದಾರೆ. ಬೇಗೂರು ಸಹ ಗಂಗರ ಸಾಮಂತರ

ಪ್ರದೇಶವಾಗಿದ್ದು ಎರಡನೆ ತಲಕಾಡು ಎಂದೇ ಪ್ರಸಿದ್ಧಿಪಡೆದಿದೆ. ನಾಗೇಶ್ವರ ದೇವಾಲಯ ಸಂಕೀರ್ಣ ಗಂಗರಶೈಲಿಯ ದೇವಾಲಯದ ವಾಸ್ತುಶಿಲ್ಪಕ್ಕೆ ಅತ್ಯುತ್ತಮ ಕೈಗನ್ನಡಿಯಂತಿದೆ.

ಗಂಗರ ದೇವಾಲಯದ ವಾಸ್ತುಶಿಲ್ಪದ ಲಕ್ಷಣಗಳನ್ನು ನೋಡಿದಾಗ

- "ಶಿಲ್ಪಿಗಳ ಕೆತ್ತನೆಗೆ ಬಹುತೇಕವಾಗಿ ಗಟ್ಟಿಕಲ್ಲನ್ನು ಆರಿಸಿರುವುದು.
- ಶಿಲ್ಪವನ್ನು ಕಲ್ಲಿನ ಅಳತೆಗೆ ಬಿಡಿಸಲು ಪ್ರಯತ್ನಿಸಿರುವುದು
- ಉಬ್ಬುಕೆತ್ತನೆ
- ಕಾರ್ಯಕ್ಕೆ ತಕ್ಕ ಮುಖಭಾವ ಅಥವಾ ಕ್ರಿಯಾಚೇತನ
- ಹಲವಾರು ಸನ್ನಿವೇಶಗಳನ್ನು ಒಂದೇ ಫಲಕದಲ್ಲಿ ಬಿಡಿಸುವುದು"[೩]

ಶಿಲ್ಪಗಳ ಕೆತ್ತನೆಗೆ ಗಟ್ಟಿಕಲ್ಲಿನ ಬಳಕೆ ಮುಖ್ಯವಾಗಿದೆ. ಕಾರಣ ಕೋಲಾರ, ಬೇಗೂರು ಪರಿಸರದಲ್ಲಿ ಗಟ್ಟಿಕಲ್ಲು ಅಧಿಕವಾಗಿ ಸಿಗುತ್ತಿದ್ದರಿಂದ ಅದರ ಸದ್ಬಳಕೆ ಮಾಡಿಕೊಂಡಿದ್ದಾರೆ. ಇವರಿಗೆ ಹೊಯ್ಸಳರಂತೆ ಬಳಪದ ಕಲ್ಲಿನ ಉಪಲಬ್ದತೆ ಇಲ್ಲದಿರುವುದು ಹಾಗೂ ಕಲ್ಲು ಗಟ್ಟಿ ಗಡಸಾಗಿದ್ದರಿಂದ ಅದರ ಅಳತೆಯನ್ನು ಮೀರಿ ಕೆತ್ತಲು ಅಸಾಧ್ಯವಾದ್ದರಿಂದ ಸಂಪೂರ್ಣಚಿತ್ರವನ್ನು ಸಿಕ್ಕ ಸ್ಥಳಾವಕಾಶದಲ್ಲಿಯೇ ಬಿಡಿಸಿರುವುದು ಹಾಗೂ ಸಾಮಾನ್ಯವಾಗಿ "ಯುದ್ಧಚಿತ್ರಣ"[೪]ವಿರುವ ಶಾಸನ ಉಬ್ಬುಕೆತ್ತನೆಗೆ ಬಹುಮುಖ್ಯ ಉದಾಹರಣೆಯಾಗಿದೆ. ಹಾಗೂ ಕಾರ್ಯಕ್ಕೆ ತಕ್ಕಂತೆ ಶಿಲ್ಪಗಳಲ್ಲಿನ ಮುಖಭಾವವನ್ನು ಕೆತ್ತಲಾಗುತ್ತಿತ್ತು. ಈ ಎಲ್ಲಾ ಲಕ್ಷಣಗಳ ಹಿನ್ನೆಲೆಯಲ್ಲಿ ಗಂಗರ ದೇವಾಲಯಗಳು ಚಿಕ್ಕ ಕಂಬಗಳಾಗಿದ್ದು ಬಸದಿಗಳ ರೂಪದಲ್ಲಿ ಇದ್ದು ಅದು ಆಕಾರದಲ್ಲಿ ಚಿಕ್ಕದಾದ್ದರಿಂದ ತಲೆತಗ್ಗಿಸಿಯೇ ಒಳಗೆ ಹೋಗುವ ರೀತಿ ಇದ್ದು ಮೂರ್ತಿಗಳು ಸಹ ಚಿಕ್ಕದಾಗಿಯೇ ಇರುತ್ತದೆ. ಈ ಲಕ್ಷಣಗಳ ಹಿನ್ನೆಲೆಯಲ್ಲಿ ಬೇಗೂರಿನ ನಾಗೇಶ್ವರ ದೇವಾಲಯದ ಚಿತ್ರಣವನ್ನು ನೋಡೋಣ.

### ೧. ಬೇಗೂರಿನ ನಾಗೇಶ್ವರ ದೇವಾಲಯದ ವಿಶೇಷತೆ:-

ಗಂಗರ ಕಾಲದ ದೇವಾಲಯಗಳು ಸಾಮಾನ್ಯವಾಗಿ ಊರ ಹೊರಗೆ, ನದಿ ತೀರದಲ್ಲಿ, ಕೆರೆಯ ಪಕ್ಕದಲ್ಲಿ, ತೋಟದ ಮಧ್ಯ ಇಲ್ಲವೇ ಬೆಟ್ಟದ ಮೇಲೆ ನಿರ್ಮಿಸುತ್ತಿದ್ದು ಕಂಡು ಬರುತ್ತದೆ. ಹಾಗೆಯೇ ನಾಗೇಶ್ವರ ದೇವಾಲಯವು ಸಹ ಊರ ಹೊರಗೆ ಕೆರೆಯ ತುದಿಯಲ್ಲಿ ನಿರ್ಮಾಣವಾಗಿದ್ದು ಸಹಜವಾಗಿಯೇ ಸೌಂದರ್ಯವೃದ್ಧಿಸಿದೆ.

ಬೆಂಗಳೂರಿನ ಹೊಸೂರು ರಸ್ತೆಯ ಬೊಮ್ಮನಹಳ್ಳಿಯಲ್ಲಿ ಬಲಕ್ಕೆ ತಿರುಗುವ ರಸ್ತೆಯಲ್ಲಿ ಎರಡು ಮೈಲಿ ದೂರ ಕ್ರಮಿಸಿದರೆ ಸಿಗುವುದೇ ಈ ಶ್ರೀನಾಗನಾಥೇಶ್ವರ ದೇವಾಲಯ. ಈ ದೇವಾಲಯ

ಒಂದು ಸಂಕೀರ್ಣದಂತಿದ್ದು ನಾಗೇಶ್ವರ, ನಗರೇಶ್ವರ, ಚೂಳೇಶ್ವರ, ಕರ್ಣೇಶ್ವರ, ಕಮಠೇಶ್ವರ ಎಂಬ ಐದು ದೇವಾಲಯಗಳಿವೆ.

ನಾಗೇಶ್ವರ ದೇವಾಲಯವು ಇವುಗಳಲ್ಲೆಲ್ಲಾ ಪ್ರಮುಖವಾದುದು. ಈ ದೇವಾಲಯವು ಗರ್ಭಗೃಹ, ಅಂತರಾಳ, ನವರಂಗ ಮತ್ತು ಮುಖಮಂಟಪಗಳನ್ನು ಹೊಂದಿದೆ. ಈ ನಾಗೇಶ್ವರ ದೇವಾಲಯದ ಅಧಿಷ್ಠಾನವನ್ನು "ಪಾದಬಂಧ ಅಥವಾ ಕಪೋತಬಂಧ ಅಧಿಷ್ಠಾನ"[3] ಎಂದು ಎರಡು ವಿಧದಲ್ಲಿಯೂ ಕರೆದರೆ ಡಾ.ಸೌಂದರ್ ರಾಜನ್‌ರವರು "ಪಾದಬಂಧ ಅಧಿಷ್ಠಾನ"[4]ವೆಂದು ಗುರುತಿಸಿದ್ದಾರೆ. ಆದರೆ ಡಾ.ದೇವರಕೊಂಡರೆಡ್ಡಿಯವರು ಅಧಿಷ್ಠಾನದಲ್ಲಿ ಪಟ್ಟಿಕಾಬರುವ ಸ್ಥಳದಲ್ಲಿ ಕಪೋತವು ಬಂದಿರುವುದರಿಂದ ಇದು "ಕಪೋತಬಂಧ ಅಧಿಷ್ಠಾನ"[5] ಎಂದಿದ್ದಾರೆ. ಆದ್ದರಿಂದ ಪಾದಬಂಧ ಅಥವಾ ಕಪೋತಬಂಧ ಅಧಿಷ್ಠಾನ ಎಂಬುದು ಸೂಕ್ತ. ಇಲ್ಲಿಯ ಅಧಿಷ್ಠಾನದಲ್ಲಿ ಜಗತಿ, ತ್ರಿಪಟ್ಟಕುಮುದ, ಕಂಪ, ಗಳ, ಶೂದ್ರಪದ್ಮ ಮತ್ತು ಕಪೋತಗಳಿದ್ದು ಕಪೋತದ ಮೇಲೆ ವೇದಿ ಬಂದಿದೆ. ಗರ್ಭಗೃಹದಲ್ಲಿ ಗೋಡೆಯ ಮುಂದೆ ಒಳಗೆ ನಾಲ್ಕು ಮೂಲೆಗಳಲ್ಲಿ ನಾಲ್ಕು ಕಂಬಗಳನ್ನು ಜೋಡಿಸಿದ್ದು ಮೇಲಿನ ಶಿಖರದ ಭಾರವನ್ನು ಹೊರಲು ಸಾಧ್ಯವಾಗುವಂತೆ ಮಾಡಿ ದೇವಾಲಯವು ಸಾಂಧಾರ ದೇವಾಲಯವಾಗುವುದನ್ನು ತಪ್ಪಿಸಿದೆ. ಅಂತರಾಳದಲ್ಲಿ ಮತ್ತೆ ಎರಡು ಕಂಬಗಳನ್ನು ಇಟ್ಟಿರುತ್ತಾರೆ. ನವರಂಗದಲ್ಲಿ ರುದ್ರಕಾಂತ ರೀತಿಯ ನಾಲ್ಕು ಕಂಬಗಳಿದ್ದು, ಈ ಕಂಬಗಳು ಚತುರಸ್ರವಾಗಿದ್ದು ಮುಂದೆ ಗುಂಡಾಗಿದ್ದು, ಕಲಶಫಲಕಗಳನ್ನು ಹೊಂದಿದೆ. ಮಾಲಾಲಂಕಾರದ ಭಾಗದಲ್ಲಿ ನೃತ್ಯಭಂಗಿಯ ಶಿಲ್ಪಗಳನ್ನು ಬಿಡಿಸಿದೆ. ಕಂಬಗಳ ಮೇಲೆ ತರಂಗ ಬೋದಿಗೆ ಇದೆ. ಮುಚ್ಚಿಗೆಯಲ್ಲಿ ಉಮಾಮಹೇಶ್ವರ ಮತ್ತು ಅಷ್ಟದಿಕ್ಪಾಲಕರ ಶಿಲ್ಪಗಳಿವೆ. ಮುಖಮಂಟಪದಲ್ಲಿ ನಾಲ್ಕು ಕಂಬಗಳ ಎರಡು ಸಾಲುಗಳಿದ್ದು ಚತುರಸ್ರ, ಅಷ್ಟಾಸ್ರ, ಚತುರಸ್ರವಾಗಿದ್ದು, ಕುಂಭವನ್ನು ಹೊಂದಿದೆ. ಮಧ್ಯದ ಚತುರಸ್ರದ ಭಾಗದಲ್ಲಿ ಮೇಲಾಲಂಕಾರ ಮತ್ತು ಕೀರ್ತಿಮುಖಗಳ ಅಲಂಕಾರವಿದೆ. ಈ ಮಂಟಪದಲ್ಲಿ ಬಸವನನ್ನು ಇಟ್ಟಿದ್ದಾರೆ. ನವರಂಗದಲ್ಲಿ ಮಹೀಷಮರ್ದಿನಿ, ವಿಷ್ಣು, ಭೈರವ, ಸೂರ್ಯ ಮತ್ತು ಸಪ್ತಮಾತೃಕೆಯರ ಶಿಲ್ಪಗಳಿವೆ. ನವರಂಗದ ಬಾಗಿಲು ಎರಡು ಕಡೆ ಗಂಗೆ-ಯಮುನೆಯರಿದ್ದಾರೆ. ದೇವಾಲಯದ ಹೊರಭಿತ್ತಿಯಲ್ಲಿರುವ ಕರ್ಣ ಮತ್ತು ಭದ್ರಗಳ ಮಧ್ಯೆ ಪಂಜರಕೋಷ್ಠಗಳು ಬಂದಿವೆ. ಕೂಟಗಳಲ್ಲಾಗಲಿ, ಶಾಲೆಗಳಲ್ಲಾಗಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ದ್ವಿತಳದ ವೇದಿಯಲ್ಲಿ ಎರಡೆರಡು ವೃಷಭಗಳನ್ನು ಇರಿಸಿರುತ್ತಾರೆ. ನಾಗೇಶ್ವರ ದೇವಾಲಯದ ಗ್ರೀವ ಮತ್ತು ಶಿಖರಗಳು ವೃತ್ತಾಕಾರದಲ್ಲಿದೆ. ಶಿಖರದ ಗ್ರೀವ ಕೋಷ್ಠಗಳಲ್ಲಿ ನಾಲ್ಕು ದಿಕ್ಕಿನಲ್ಲಿ ನಾಲ್ಕು ದೇವತೆಗಳನ್ನು ಬಿಡಿಸಿದೆ. ಗರ್ಭಗೃಹದ ಲಿಂಗವು ಚೌಕಾಕಾರವಾಗಿದೆ.

## ೨. ನಗರೇಶ್ವರ ದೇವಾಲಯ:-

ನಾಗೇಶ್ವರ ದೇವಾಲಯದ ಸಂಕೀರ್ಣದ ಪಕ್ಕದಲ್ಲಿ ಬಲಕ್ಕೆ ಇರುವುದೇ ನಗರೇಶ್ವರ ದೇವಾಲಯ. ಇದರ ಅಧಿಷ್ಠಾನವು ಎತ್ತರವಾಗಿದ್ದು, ಪಾದಬಂಧ ಅದಿಷ್ಠಾನವನ್ನು ಹೊಂದಿದೆ. "ದೇವಾಲಯದ ಭಿತ್ತಿ ಮೊದಲು ಇಟ್ಟಿಗೆಯದಾಗಿದ್ದು"[೮] ಈಗ ಜೀರ್ಣೋದ್ಧಾರವಾಗಿದೆ. ಇದರ ಮುಖಮಂಟಪದಲ್ಲಿ ಉಮಾಮಹೇಶ್ವರ ಸಹಿತವಿರುವ ಅಷ್ಟದಿಕ್ಪಾಲಕರ ಉಬ್ಬುಶಿಲ್ಪಗಳಿವೆ. ಇದರ ಬಾಗಿಲಲ್ಲಿ ಗಜಲಕ್ಷ್ಮಿಯ ಬಿಂಬವಿದ್ದು ನಿಲುವುಗಳಲ್ಲಿ ಬಳ್ಳಿಗಳ ಅಲಂಕಾರವಿದೆ. ಈ ದೇವಾಲಯದ ಒಳಗೆ ನಾಲ್ಕು ಕಂಬಗಳಿವೆ. ಈ ದೇವಾಲಯದಲ್ಲಿ ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪಗಳಿವೆ. ಈ ದೇವಾಲಯದಲ್ಲಿ ಗಂಗರ ಕಾಲದ ಮಹಿಷಿಮರ್ಧಿನಿ ಮತ್ತು ದ್ವಿಬಾಹು ಗಣಪತಿಯ ಶಿಲ್ಪಗಳಿವೆ.

## ೩. ಚೋಳೇಶ್ವರ ದೇವಾಲಯ:-

ನಾಗೇಶ್ವರ ದೇವಾಲಯದ ಎಡಭಾಗಕ್ಕೆ ಇರುವುದೇ ಈ ಚೋಳೇಶ್ವರ ದೇವಾಲಯ. ಈ ದೇವಾಲಯ ಪ್ರತಿಕ್ರಮ ಅಧಿಷ್ಠಾನವನ್ನು ಹೊಂದಿದ್ದು, ಜಗತಿ, ವೃತ್ತಕುಮುದ, ಗಳ ಮತ್ತು ಪಟ್ಟಿಗಳಲ್ಲಿ ಪ್ರತಿಮುಖ ಬಂದಿದೆ. ಪ್ರತಿ ಮತ್ತು ಕಂಠ ಭಾಗಗಳು ನಾಗೇಶ್ವರ ದೇವಾಲಯದ್ದಕ್ಕಿಂತ ಭಿನ್ನವಾದದ್ದು. ಭಿತ್ತಿಯ ಉಬ್ಬುಕಂಬಗಳಿಗೆ ನೇರವಾಗಿ ಕಪೋತದ ಭಾಗದಲ್ಲಿ ನಾಸಿಗಳಿವೆ. ಮೊದಲ ತಳದಲ್ಲಿ ಬರುವ ಕೂಟವಾಗಲಿ, ಶಾಲಾ ಆಗಲೀ ಹೆಚ್ಚಿನ ಅಲಂಕಾರ ಹೊಂದಿಲ್ಲ. ಎರಡನೇ ತಳದಲ್ಲಿ ಕೂಟಗಳಿರಬೇಕಾದ ಕಡೆಗಳಲ್ಲಿ ವೃಷಭಗಳಿವೆ. ಇಲ್ಲಿಯದು ಚೌಕಾಕಾರವಾದ ಶಿಖರ. ಅಷ್ಟಾಗಿ ಸುಂದರವಾಗಿಲ್ಲದ ಶಿಖರವಿದ್ದು ಗರ್ಭಗೃಹ, ಅಂತರಾಳ, ನವರಂಗಗಳಿವೆ. ಇದರ ಅಧಿಷ್ಠಾನವು ಪ್ರತಿಬಂಧ ಮಾದರಿಯದೇ ಆಗಿದ್ದು, ಹೊರಭಿತ್ತಿಯಲ್ಲಿ ಕರ್ಣ, ಭದ್ರ ಭಾಗಗಳನ್ನು ಹೊಂದಿದೆ. ಇಲ್ಲಿ ದ್ವಿತಳ ವಿಮಾನವಿದ್ದು ಶಿಖರವು ಚೌಕಾಕಾರದ್ದಾಗಿದೆ. ಇದರ ಕಂಬಗಳೂ ನಾಗೇಶ್ವರ ದೇವಾಲಯದ ಕಂಬಗಳ ಮಾದರಿಯನ್ನು ಅನುಸರಿಸಿದ ಕಂಬಗಳಾಗಿವೆ.

## ೪. ಕರ್ಣೇಶ್ವರ ದೇವಾಲಯ:-

ಈ ದೇವಾಲಯ ಜೀರ್ಣೋದ್ಧಾರವಾಗಿದ್ದು, ಇಲ್ಲಿ ಗರ್ಭಗೃಹ, ಅಂತರಾಳ ಮತ್ತು ನವರಂಗವನ್ನು ಹೊಂದಿದೆ. ನವರಂಗ ಈಗ ತೆರೆದ ಮಂಟಪವಾಗಿದೆ. ಈ ದೇವಾಲಯ ಚೋಳೇಶ್ವರ ದೇವಾಲಯದ ಪಕ್ಕದಲ್ಲಿಯೇ ಇದೆ. ಚಿಕ್ಕ ಕಂಬಗಳನ್ನು ಹೊಂದಿದ್ದು ತರಂಗ ಬೋಧಿಗೆಯನ್ನು ಹೊಂದಿದೆ. ಇದರ ಮುಚ್ಚಿಗೆಯಲ್ಲಿ ಉಮಾಮಹೇಶ್ವರ ಸಹಿತ ಅಷ್ಟದಿಕ್ಪಾಲಕರ ಶಿಲ್ಪಗಳಿವೆ. ಅಧಿಷ್ಠಾನ ಕಂಡುಬರುವುದಿಲ್ಲ.

## ೫. ಕಮಠೇಶ್ವರ ದೇವಾಲಯ:-

ನಾಗೇಶ್ವರ ದೇವಾಲಯಕ್ಕೆ ಹೊಂದಿಕೊಂಡಂತೆ ಅದರ ಮುಂಬದಿಯಲ್ಲಿದೆ. ಇದು ಏಕತಳ ದೇವಾಲಯವಾಗಿದ್ದು, ಇದರಲ್ಲಿರುವ ಕಾಳಿಕಾದೇವಿಮೂರ್ತಿ ವಿಜಯನಗರ ಕಾಲದ್ದು. ಕಮಠೇಶ್ವರ ಎಂದು ಕರೆಯುವ ಲಿಂಗವೂ ಇಲ್ಲಿದೆ. ಈ ದೇವಾಲಯ ಚೌಕಾಕಾರದ ಶಿಖರ ಹೊಂದಿದೆ. ಈ ದೇವಾಲಯವು ಕೊಲ್ಲೂರಿನ ಮೂಕಾಂಬಿಕೆಯನ್ನು ಹೋಲುತ್ತಿದ್ದು ಇದು ಅದಕ್ಕೂ ಪೂರ್ವದಲ್ಲಿ ಸ್ಥಾಪಿಸಲ್ಪಟ್ಟಿದೆ.

## ೩.೧ ಚೌಡೇಶ್ವರಿ ದೇವಾಲಯದ ವೈಶಿಷ್ಟ್ಯ:-

ಬೇಗೂರಿನ ಊರ ಹೊರಗೆ ಇರುವ ಚೌಡೇಶ್ವರಿ ದೇವಾಲಯವು ಬೇಗೂರಿನಿಂದ ಬೊಮ್ಮನಹಳ್ಳಿಗೆ ಹೊರಡುವ ದಾರಿಯಲ್ಲಿ ಬಲಭಾಗಕ್ಕೆ ಸಿಗುತ್ತದೆ. ಐತಿಹಾಸಿಕವಾಗಿ ಮಹತ್ವ ಪಡೆದುಕೊಂಡ ಗ್ರಾಮದೇವತೆಯಾಗಿದ್ದು, ಇಂದು ಸಂಪೂರ್ಣವಾಗಿ ಆಧುನಿಕವಾದ ರೀತಿಯಲ್ಲಿ ಜೀರ್ಣೋದ್ಧಾರವನ್ನು ಹೊಂದಿದ್ದು ಆಯತಾಕಾರದಲ್ಲಿದೆ. ಇದರ ಮುಚ್ಚಿಗೆಯಲ್ಲೂ ಉಮಾಮಹೇಶ್ವರ ಸಹಿತ ಅಷ್ಟದಿಕ್ಪಾಲಕ ಶಿಲ್ಪಗಳಿವೆ. ಈ ಚೌಡೇಶ್ವರಿ ದೇವಾಲಯವು ಸಪ್ತ ಮಾತೃಕಾ ದೇವಾಲಯವಾಗಿದೆ. ಎಡಗಡೆ ಒಂದು ಕಲ್ಯಾಣಿಯನ್ನು ಕಾಣಬಹುದು. ವರ್ಷಕ್ಕೊಮ್ಮೆ ಊರಬ್ಬದಂದು ಬೇಗೂರು ಹಾಗೂ ಚಿಕ್ಕಬೇಗೂರು ಗ್ರಾಮಸ್ಥರು ಸೇರಿ ದೀಪ ಬೆಳಗುವುದರ ಜೊತೆಗೆ ಬೆಂಕಿಯ ಹೊಂಡವನ್ನು ಹಾಕುವುದರ ಮೂಲಕ ಜನರ ಹರಕೆಯನ್ನು ಈಡೇರಿಸುತ್ತಾರೆ. ಹಾಗೂ ಅಲ್ಲಿ ಸಪ್ತಮಾತೃಕೆಯರ ಪೂಜೆ ವಿಶೇಷವಾಗಿದ್ದು, ಕರ್ನಾಟಕದಲ್ಲಿ ಸಪ್ತಮಾತೃಕೆಯರಿಗೆಂದೇ ಇರುವ ವಿಶೇಷ ದೇವಾಲಯಗಳಲ್ಲಿ ಇದು ಸಹ ಒಂದಾಗಿದೆ.

ನಾಗೇಶ್ವರ ದೇವಾಲಯ ಆವರಣ ಒಳಗೊಂಡಂತೆ ಎಲ್ಲಾ ದೇವಾಲಯಗಳ ಸಾಮಾನ್ಯ ಅಂಶವೆಂದರೆ ನವರಂಗದ ಮುಚ್ಚಿಗೆಯಲ್ಲಿ ಉಮಾಸಹಿತ ಶಿವನ ಶಿಲ್ಪವಿದ್ದು, ಅಷ್ಟದಿಕ್ಪಾಲಕರು ಸುತ್ತಲೂ ಇದ್ದಾರೆ. ಇಲ್ಲಿ ವೃತ್ತಾಕಾರದ ಕಂಬಗಳನ್ನು ಬಳಸಿದ್ದು, ತರಂಗ ಬೋಧಿಗೆಯನ್ನು ಹೊಂದಿದೆ. ನಾಗೇಶ್ವರ ದೇವಾಲಯದ ಮುಖಮಂಟಪದಲ್ಲಿ ಬಳಸಿರುವ ಕಂಬಗಳು ಚಿಕ್ಕದಾಗಿದೆ. ಗಣಪತಿ ಶಿಲ್ಪಗಳು ತಮ್ಮ ಕಾಲುಗಳನ್ನು ಪದ್ಮಾಸನ ಹಾಕಿಕೊಂಡಿರುವಂತೆ ಬಿಡಿಸಿದ್ದು ನೀಳದೇಹವುಳ್ಳವಾಗಿ ಕುಬ್ಜಕೈಕಾಲುಗಳನ್ನು ಹೊಂದಿದೆ. ಸುಮಾರು ೧೩೦೦ವರ್ಷಗಳಷ್ಟು ಪುರಾತನವಾದ ಈ ದೇವಾಲಯ ರಾಜ್ಯದ ಅತ್ಯಂತ ಹಳೆಯ ದೇವಾಲಯವಾಗಿದೆ.

ಈ ದೇವಾಲಯದ ಗೋಪುರದ ಮೇಲೆ ಬೆಂಗಳೂರು ಮಹಾನಗರ ಪಾಲಿಕೆಯ ಚಿಹ್ನೆಯಾದ ಗೋಪುರದ ಕೆತ್ತನೆಯಿದ್ದು, ಇದೇ ಬೆಂಗಳೂರು ನಿರ್ಮಾತೃ ಕೆಂಪೇಗೌಡರಿಗೆ ಸ್ಫೂರ್ತಿ ನೀಡಿದಂತೆ ಭಾಸವಾಗುತ್ತದೆ. ಹಾಗೂ ಈ ದೇವಾಲಯದ ಆವರಣದಲ್ಲಿ ಹಲವು ವೀರಗಲ್ಲು, ಶಾಸನಗಳು

ದೊರೆತಿದ್ದು, "ಯುದ್ಧಚಿತ್ರಣವುಳ್ಳ ಶಾಸನ"[೯], "ನಾಗತ್ತರನ ಶಾಸನ"[೧೦], "ಅಶ್ವತ್ಥಮರದ ಕೆಳಗಿರುವ ಶಾಸನ"[೧೧], "ಪೇಗೂರುವಿನ ವೀರಗಲ್ಲು"[೧೨], ನಾಗತ್ತರನ ಮಗಳಾದ "ತೊಂಡಬ್ಬೆಯ ಶಾಸನ"[೧೩]ವಿದ್ದು, ಇವುಗಳಲ್ಲಿ ಪೇಗೂರುವಿನ ವೀರಗಲ್ಲು ಹಾಗೂ ತೊಂಡಬ್ಬೆಯ ಶಾಸನವನ್ನು ದೇವಾಲಯದ ಹಿಂದೆ ಗೋಡೆಗೆ ಅಂಟಿಸಿದ್ದಾರೆ. ಅಂದಿನ ಕಾಲದ ರಾಜರು ಸುರಕ್ಷತೆಗೋಸ್ಕರ, ಮುಂದಾಲೋಚನೆಯನ್ನು ಮೆಚ್ಚಲೇಬೇಕಾದ್ದು. ಹಾಗೂ ಹೆಚ್ಚು ಶಾಸನಗಳು ದೇವಾಲಯದ ಆವರಣದಲ್ಲಿದ್ದರಿಂದ ರಕ್ಷಿಸಿಕೊಂಡು ಬರಲಾಗಿದೆ. ಕೆಲವು ಮುಖ್ಯಶಾಸನಗಳು ಬೆಂಗಳೂರು ಮ್ಯೂಸಿಯಂನಲ್ಲಿಡಲಾಗಿದೆ.

ಈ ದೇವಾಲಯಕ್ಕೆ ೧೯೭೭ರಲ್ಲಿ ಶೃಂಗೇರಿಯ ಜಗದ್ಗುರುವರ್ಯರಾದ ಶ್ರೀವಿದ್ಯಾತೀರ್ಥ ಸ್ವಾಮಿಗಳು ಮತ್ತು ಭಾರತೀತೀರ್ಥಸ್ವಾಮಿಗಳು ಭೇಟಿ ನೀಡಿರುವುದು ಸ್ಮರಣೀಯ. ವೀರಪ್ಪ ಮೊಯಿಲಿಯವರು ಅರ್ಥಸಚಿವರಾಗಿದ್ದಾಗ ಈ ದೇವಾಲಯಕ್ಕೆ ಭೇಟಿನೀಡಿ ಮೂವತ್ತು ಸಾವಿರ ರೂಗಳನ್ನು ಜೀರ್ಣೋದ್ಧಾರಕ್ಕೆ ಬಿಡುಗಡೆ ಮಾಡಿದ್ದು ಗಮನಿಸಬಹುದು.

ಇತ್ತೀಚಿನ ಬೆಳವಣಿಗೆಯಲ್ಲಿ ದೇವಾಲಯದ ಜೀರ್ಣೋದ್ಧಾರ ಬಹು ಪ್ರಾಮುಖ್ಯತೆ ಪಡೆದಿದ್ದು ನಾಲ್ಕು ದಿಕ್ಕುಗಳಿಗೂ ನಾಲ್ಕು ಬೃಹದಾಕಾರದ ಗೋಪುರಗಳನ್ನು ನಿರ್ಮಿಸುವ ಕಾರ್ಯ ದಾನಿಗಳ ಕೃಪೆಯಿಂದ ಕೋಟ್ಯಾಂತರ ರೂಗಳಲ್ಲಿ ನಿರ್ಮಾಣ ನಡೆಯುತ್ತಿದೆ. ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ ನಾಲ್ಕು ದಿಕ್ಕಿಗೂ ಗೋಪುರ ನಿರ್ಮಾಣ ಕಾರ್ಯ ಸಾಗುತ್ತಿದೆ.

ಈ ದೇವಾಲಯಕ್ಕೆ ಚೋಳರ ಕಾಲದ್ದು ಎಂಬ ಮಾತು ಅಲ್ಲಿನ ಪರಿಸರದಲ್ಲಿ ಹೆಚ್ಚಾಗಿ ಪ್ರಚಲಿತದಲ್ಲಿರುವ ಮಾತು. ಈ ಚೋಳ ಪ್ರತಿಷ್ಠೆ ಎಂಬುದು ಪುರಾತನ ವಾಸ್ತುಶಿಲ್ಪದ ದೃಷ್ಟಿಯಿಂದ ಮಹತ್ವದ ವಿಚಾರವಾಗಿದೆ. ನಾವು ಗಂಗರ ದೇವಾಲಯಗಳೆಂದು ಗುರುತಿಸುವ ಅನೇಕ ದೇವಾಲಯಗಳನ್ನು ಚೋಳಪ್ರತಿಷ್ಠೆ ಅಥವಾ ಚೋಳ ಅರಸರು ಒಂದೇ ದಿನದಲ್ಲಿ ನಿರ್ಮಿಸಿದ ಕಟ್ಟಡಗಳು ಎಂದು ಸ್ಥಳೀಯರು ನಂಬುತ್ತಾರೆ. ವಿದ್ವಾಂಸರು ಸಹ ಇದನ್ನು ಚೋಳರ ಕಾಲದ್ದೆಂದೇ ಹೇಳಿರುತ್ತಾರೆ. ಈ ವಿದ್ವಾಂಸರ ಇಂತಹ ತೀರ್ಮಾನಕ್ಕೂ ಮೇಲಿನ ನಂಬಿಕೆಯೇ ಕಾರಣವಿರಬಹುದು.

ಈ ಚೋಳಪ್ರತಿಷ್ಠೆಯನ್ನು ಡಾ.ದೇವರಕೊಂಡಾರೆಡ್ಡಿಯವರು ಈ ರೀತಿ ವಿವರಿಸುತ್ತಾರೆ. "ಚೋಳರು ಗಂಗವಾಡಿಯ ಪೂರ್ವಭಾಗವನ್ನು ಸುಮಾರು ೧೫೦ ವರ್ಷಗಳ ಕಾಲ ಆಳಿದರು. ರಾಜ್ಯವನ್ನು ಪಡೆದ ಚೋಳರು ಜನರನ್ನು ತಮ್ಮ ಕಡೆಗೆ ಒಲಿಸಿಕೊಳ್ಳಬೇಕಿತ್ತು. ಹೀಗಾಗಿ ದೇವಾಲಯಗಳಿಗೆ ದಾನಗಳನ್ನು ಕೊಡುವುದರ ಜೊತೆಗೆ ದೇವಾಲಯಗಳ ಅಧಿಷ್ಠಾನ ಗೋಡೆ ಮುಂತಾದ ಕಡೆ ಶಾಸನಗಳನ್ನು ಬರೆಸಿರುತ್ತಾರೆ. (ಬೇಗೂರು ದೇವಾಲಯದ ಅಧಿಷ್ಠಾನದಲ್ಲಿ ಇವರ ತಿಗಳಾರಿಲಿಪಿಯ ಶಾಸನಗಳನ್ನು ಅಧಿಕವಾಗಿ ಕಾಣಬಹುದು) ಇದರ ಜೊತೆಗೆ ಚೋಳರ ನಂತರ ಬಂದ ಹೊಯ್ಸಳರ ಕಾಲದಲ್ಲಿ ಅರಸರು ಬದಲಾದರೇ ಹೊರತು ಅಧಿಕಾರಿಗಳು ಚೋಳರ ಕಾಲದಲ್ಲಿ ತಮಿಳುನಾಡಿನಿಂದ

ಬಂದವರೇ ಆಗಿದ್ದರು. ಹೊಯ್ಸಳರ ನಂತರ ಬಂದ ವಿಜಯನಗರದ ಅರಸರ ಕಾಲದಲ್ಲಿ ಆರಂಭದ ಅಧಿಕಾರಿಗಳು ಈ ಭಾಗದಲ್ಲಿ ತಮಿಳರೇ ಆಗಿದ್ದರು. ಈ ಕಾರಣಗಳಿಂದ 'ಚೋಳಪ್ರತಿಷ್ಠೆ' ಎಂಬ ನೆನಪು. ಜನರ ಬಾಯಿಂದ ಬಾಯಿಗೆ ಬಂದು ಅದೇ ಜನಮನದಲ್ಲಿ ಬೇರೂರಿದೆ."

ಈ ಕಾರಣದಿಂದ ಚೋಳಪ್ರತಿಷ್ಠೆ ಎಂಬ ಮಾತು ಬೇಗೂರು ದೇವಾಲಯಕ್ಕೂ ಅಂಟಿಕೊಂಡಿದ್ದು, ಇಲ್ಲಿನ ಅರ್ಚಕರಾದ ಅನಂತಸ್ವಾಮಿದೀಕ್ಷಿತರು ಮೂಲತಃ ತಮಿಳುನಾಡಿನವರು ಎಂಬುದು ಇಲ್ಲಿ ಸ್ಮರಿಸಬೇಕಾದ ವಿಚಾರ. ಆದರೂ ಒಂದು ಪ್ರಾಚೀನ ಸ್ಮಾರಕ ದೇವಾಲಯವನ್ನು ವಾಸ್ತವ ನೆಲೆಯಲ್ಲಿ ನಿಂತು ನೋಡುವ ಪರಿ ಜನರಲ್ಲಿ ಬರಬೇಕಿದೆ. ಹಾಗೂ ಬೇಗೂರು ದೇವಾಲಯವು ಪ್ರಾಚೀನತೆಯಿಂದ ಪ್ರಾಮುಖ್ಯತೆಯನ್ನು ಪಡೆದಿದ್ದು, ಅದರ ಮೂಲ ರೂಪಕ್ಕೆ ಧಕ್ಕೆಬರದಂತೆ ಕಾಪಾಡಿಕೊಳ್ಳುವ ಅವಶ್ಯಕತೆಯಿದೆ.

## ಅಡಿ ಟಿಪ್ಪಣಿ

೧. ಭಾರತ ದೇವಾಲಯದ ನೆಲೆ-ಹಿನ್ನೆಲೆ : ಪ್ರೊ.ಎಸ್.ಕೆ.ರಾಮಚಂದ್ರರಾವ್, ಪುಟ-೫

೨. ಭಾರತ ದೇವಾಲಯದ ನೆಲೆ-ಹಿನ್ನೆಲೆ : ಪ್ರೊ.ಎಸ್.ಕೆ.ರಾಮಚಂದ್ರರಾವ್, ಪುಟ-೨೪

೩. ಗಂಗರ ಶಿಲ್ಪಕಲೆ : ಡಾ.ದೇವರಕೊಂಡಾರೆಡ್ಡಿ, ಪುಟ-೩, ೪

೪. ಎಫಿಗ್ರಾಫಿಯಾ ಕರ್ನಾಟಿಕ ix : ಬೆಂಗಳೂರು-೮೩

೫. ಬೆಂಗಳೂರು ದರ್ಶನ : ಪ್ರೊ.ಎಲ್.ಎಸ್.ಶೇಷಗಿರಿರಾವ್, ಪುಟ-೪೧೮

೬. ಅಪ್ಪರ್ ದ್ರಾವಿಡ ದೇಶ : ಪುಟ-೨೦೦

೭. ತಲಕಾಡಿನ ಗಂಗರ ದೇವಾಲಯಗಳು-ಒಂದು ಅಧ್ಯಯನ : ಡಾ.ದೇವರಕೊಂಡಾರೆಡ್ಡಿ, ಪುಟ-೧೭೨ -೧೭೩

೮. ಎಫಿಗ್ರಾಫಿಯಾ ಕರ್ನಾಟಿಕ ix : ಬೆಂಗಳೂರು-೮೩

೯. ಇತಿಹಾಸ ದರ್ಶನ ಸಂಪುಟ-೩, ಸಂಚಿಕೆ-೧, : ಪುಟ-೧೫೯. ೧೯೮೮

೧೦. ಎಫಿಗ್ರಾಫಿಯಾ ಕರ್ನಾಟಿಕ ix : ಬೆಂಗಳೂರು-೮೯

೧೧. ಎಫಿಗ್ರಾಫಿಯಾ ಕರ್ನಾಟಿಕ ix : ಬೆಂಗಳೂರು-೮೭

೧೨. ಎಫಿಗ್ರಾಫಿಯಾ ಕರ್ನಾಟಿಕ ix : ಬೆಂಗಳೂರು-೮೮

೧೩. ತಲಕಾಡಿನ ಗಂಗರ ದೇವಾಲಯಗಳು-ಒಂದು ಅಧ್ಯಯನ : ಡಾ.ದೇವರಕೊಂಡಾರೆಡ್ಡಿ, ಪುಟ-೩೨

# ಅಧ್ಯಾಯ – ೪

## ಬೇಗೂರು ಶಾಸನಗಳ ಸಾಂಸ್ಕೃತಿಕ ಮಹತ್ವ ಒಂದು ವಿಶ್ಲೇಷಣೆ

ಶಾಸನ ಎಂದರೇನು? ಅದರ ಸ್ವರೂಪ, ಬರಹ, ಯಾವ ಯಾವ ರಾಜವಂಶಗಳ ಕಾಲದಲ್ಲಿ ಶಾಸನಗಳು ರಚಿಸಿದ ವಿಧಾನ ಯಾವ ರೀತಯದ್ದು, ಈ ಎಲ್ಲಾ ವಿಷಯಗಳ ಮೇಲೂ ವಿದ್ವಾಂಸರು ಸಂಶೋಧನೆಯನ್ನು ಮಾಡಿ ದೊಡ್ಡ ಪ್ರಮಾಣದ ಕೊಡುಗೆಯನ್ನೇ ನೀಡಿದ್ದಾರೆ. ಆದರೆ 'ಬೇಗೂರು' ಅಥವಾ 'ಬೆಂಪೂರು-೧೨'ರ ಕ್ಷೇತ್ರದಲ್ಲಿ ಬರುವ ಶಾಸನಗಳ ಮಹತ್ವ ಹಾಗೂ ವಿಶೇಷತೆಯನ್ನು ಸಮಗ್ರವಾಗಿ ಅಧ್ಯಯನ ಮಾಡಿರುವುದು ಕಡಿಮೆ. ಈ ಹಿನ್ನೆಲೆಯಲ್ಲಿ ಬೇಗೂರು ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತದೆ. ಶಾಸನಗಳೆಂದರೆ "ತಾಳೆಗರಿ, ಬೂರ್ಜಪತ್ರ, ಕಾಗದ ಮುಂತಾದವುಗಳ ಮೇಲೆ ಕಂಡು ಬರುವ ಬರಹಗಳನ್ನು ಶಾಸನಗಳೆಂದು ಸ್ಥೂಲವಾಗಿ ಕರೆಯಬಹುದು."[೧] 'ಶಾಸನ' ಶಬ್ದದ ಮೂಲರೂಪ 'ಆಜ್ಞೆ' ಎಂದು ಅಂದರೆ ರಾಜರ ಆಜ್ಞೆಗಳನ್ನು ತಿಳಿಸುವ ಬರಹವನ್ನು 'ಶಾಸನ' ಎಂದು ಕರೆಯುತ್ತಾರೆ. ಆದರೆ ರಾಜನ ಆಜ್ಞೆಗಳನ್ನು ರಾಜನೇ ಪ್ರತ್ಯಕ್ಷದರ್ಶಿಯಾಗಿ ನಿಂತು ಕೆತ್ತಿಸಿದ, ಕೆತ್ತಿದ ಎಂದು ಹೇಳಲಾಗುವುದಿಲ್ಲ. ವಿಶಾಲವಾದ ಸಾಮ್ರಾಜ್ಯದಲ್ಲಿ ಮೂಲೆ ಮೂಲೆಗೂ ಶಾಸನಗಳನ್ನು ನಿಲ್ಲಿಸಲಾಗಿರುತ್ತದೆ. ಈ ಕಾರ್ಯ ರಾಜರ ಆಜ್ಞೆಯಂತೆ ಅವರ ಮಾಂಡಲಿಕರು, ಸಾಮಂತರಾಜರು, ಮಂತ್ರಿಗಳು ಶಾಸನಗಳನ್ನು ಕೆತ್ತಿಸುತ್ತಿದ್ದರು. ಬೇಗೂರಿನಲ್ಲಿ ಸಿಗುವ ಶಾಸನಗಳು ಗಂಗರ ಸಾಮಂತರಾದಂತ ನಾಗತ್ತರ, ಎರೆಯಪ್ಪ, ಪಟ್ಟಣಶೆಟ್ಟಿಗಳ ಶಾಸನವಾಗಿದ್ದು, ಈ ಪ್ರದೇಶದ ಅಧ್ಯಯನಕ್ಕೆ ಬಹುಮಹತ್ವದ ಪಾತ್ರವನ್ನು ವಹಿಸಿವೆ.

ಶಾಸನಗಳ ಪ್ರಕಾರಗಳನ್ನು ನೋಡಿದಾಗ ವಿವಿದ್ದೋದ್ದೇಶಗಳನ್ನು ತಿಳಿಸುವುದಕ್ಕಾಗಿ ಶಾಸನಗಳನ್ನು ಬರೆದಿದ್ದಾರೆ. "ಯಜ್ಞಯಾಗಾದಿಗಳಿಗೆ ಸಂಬಂಧಿಸಿದ ಶಾಸನಗಳು ಯೂಪಶಾಸನಗಳು, ಬಂಡೆಗಳ ಮೇಲೆ ಕಡೆದ ಶಾಸನಗಳು ಬಂಡೆಗಲ್ಲು ಶಾಸನಗಳು, ಕಂಬಗಳ ಮೇಲಿರುವ ಶಾಸನಗಳು ಸ್ತಂಭಶಾಸನಗಳು, ಮೂರ್ತಿಗಳ ಮೇಲಿನ ಶಾಸನಗಳು ಪ್ರತಿಮಾಶಾಸನಗಳು, ರಾಜರು ಹೊರಡಿಸಿದ ಶಾಸನಗಳು ರಾಜಶಾಸನಗಳು, ದಾನ ಉಲ್ಲೇಖಿಸುವ ಶಾಸನಗಳು ದಾನಶಾಸನಗಳು, ವಿಜಯವನ್ನು ಹೇಳುವ ಶಾಸನಗಳು ವಿಜಯಶಾಸನಗಳು, ಧರ್ಮಕಾರ್ಯಕ್ಕೆ ಸಂಬಂಧಿಸಿದ ಶಾಸನಗಳು ಧರ್ಮಶಾಸನಗಳು, ಅಭಯ ನೀಡಿದ ಶಾಸನಗಳು ಅಭಯಶಾಸನಗಳು, ಬೆಲೆಕೊಟ್ಟು ಕೊಂಡದ್ದನ್ನು ಹೆಸರಿಸುವ ಶಾಸನಗಳು, ಸತಿಹೋದವರ ಸ್ಮರಣೆಗಾಗಿ ನಿಲ್ಲಿಸಿದ ಶಾಸನಗಳು ಮಹಾಸತಿಶಾಸನಗಳು, ಸೂರ್ಯಗ್ರಹಣ ಕಾಲದಲ್ಲಿ ಮೃತ್ಯುವನ್ನು ಅಪ್ಪಿದವರ ಶಾಸನಗಳು, ಜೈನರ ಅನಶನ ವ್ರತಮಾಡಿ ಸತ್ತವರ ಸಲುವಾಗಿ ತಯಾರಿಸಿದ ನಿಸದಿ ಶಾಸನಗಳು, ಪ್ರಶಸ್ತಿಶಾಸನಗಳು, ಯಂತ್ರಕಲ್ಲು ಶಾಸನಗಳು"[೨] ಮುಂತಾದ ಹಲವು ಶಾಸನ ಪ್ರಕಾರಗಳನ್ನು ವಿದ್ವಾಂಸರು ಗುರುತಿಸಿದರು ಬೇಗೂರಿನ ಪರಿಸರದಲ್ಲಿ ಸಿಗುವುದು

ಪ್ರತಿಮಾ ಶಾಸನಗಳು, ದಾನಶಾಸನಗಳು, ವೀರಮಾಸ್ತಿಕಲ್ಲು, ಧರ್ಮಶಾಸನಗಳನ್ನು ಕುರಿತಾದ್ದನ್ನು ಕಾಣಬಹುದು.

ಇಲ್ಲಿನ ಶಾಸನಗಳು ಸಂಪ್ರದಾಯದಂತೆ ಶುಭವಾಚಕಗಳಾದ 'ಸ್ವಸ್ತಿ', 'ಸ್ವಸ್ತಿಶ್ರೀ', 'ಶ್ರೀ' ಎಂಬ ಅಕ್ಷರಗಳಿಂದ ಪ್ರಾರಂಭವಾಗಿ ನಂತರ ದೇವತಾಶ್ಲೋಕವಿರುವುದು ಸಾಮಾನ್ಯವಾಗಿ ಬರುವುದರಿಂದ ಇದು ಶಿವೋಪಾಸಕರು ಬಳಸಿದ್ದಾರೆ ಎಂಬುದನ್ನು ನಿರ್ದಿಷ್ಟವಾಗಿ ಗುರ್ತಿಸಬಹುದು. ಈ ಶಾಸನಗಳು ಮುಖ್ಯವಾಗಿ ವೀರರ ಬಗ್ಗೆ, ಕೆರೆ ಕಟ್ಟಿಸಿರುವ ಬಗ್ಗೆ, ದಾನ ನೀಡಿರುವ ವಿಷಯಗಳನ್ನು ಒಳಗೊಂಡಿದ್ದು ಬಹುಮುಖ್ಯವಾಗಿ ಯುದ್ಧಚಿತ್ರಣವಿರುವ ವೀರಗಲ್ಲು ಶಿಲ್ಪದ ದೃಷ್ಟಿಯಿಂದ ಒಂದು ಯುದ್ಧ ಭೀಕರತೆಯ ಪರಾಕಾಷ್ಠತೆಯನ್ನು ಕಾಣಬಹುದು. ಹಾಗೆಯೇ ಮೊದಲು ರಾಜರು, ಮಾಂಡಲಿಕರು ಕೆರೆಗಳನ್ನು ನೀರಾವರಿ ದೃಷ್ಟಿಯಿಂದ ನಿರ್ಮಿಸಿರುವುದಕ್ಕೆ ಬಹುಮುಖ್ಯ ನಿದರ್ಶನಗಳಲ್ಲಿ ನಾಗತ್ತರನ ಶಾಸನವು ಆಧಾರವಾಗಿ ಸಿಗುತ್ತದೆ.

ವಿಶೇಷವಾಗಿ ಬೇಗೂರಿನ ದೇವಾಲಯದ ಆವರಣದಲ್ಲಿರುವ ಬೆಂಗಳೂರು ಪದ ನಿಷ್ಪತ್ತಿ ಕುರಿತಾದ ಶಾಸನ ಬಹುಮಹತ್ವದು ಹಾಗೂ ಹೆಚ್ಚು ಚರ್ಚೆಗೆ ಒಳಪಡಿಸುವ ಒಂದು ವಿಷಯವಾಗಿ ಕಂಡು ಬರುತ್ತದೆ. ಒಟ್ಟಾರೆ ಈ ಎಲ್ಲಾ ಶಾಸನಗಳು ಒಂದು ಪಟ್ಟಣವನ್ನು ಪ್ರಾಚೀನ ಕಾಲದ ಆಧಾರದ ಮೇಲೆ ಪುನರ್ ರಚಿಸಿಕೊಳ್ಳುವ ಒಂದು ಕಾರ್ಯ ಬಹುಮಹತ್ವಯುತವಾದದ್ದು ಎಂದು ಹೇಳಬಹುದು.

## ೪.೧ ಬೇಗೂರು ಯುದ್ಧ ಚಿತ್ರಣವಿರುವ ಶಾಸನ:-

**ಊರು** : ಬೇಗೂರು

**ತಾಲ್ಲೂಕು:** ಬೆಂಗಳೂರು ದಕ್ಷಿಣ

**ಜಿಲ್ಲೆ** : ಬೆಂಗಳೂರು

**ರಾಜಮನೆತನ** : ಗಂಗರು

**ರಾಜ** : ಎಱೆಯಪ್ಪ

**ಮಾಂಡಲಿಕ** : ನಾಗತ್ತರ

**ಕಾಲ** : ಕ್ರಿ.ಶ.ಸು. ೮೯೦-೯೨೦

**ಸ್ಥಳ** : ನಾಗೇಶ್ವರ ದೇವಸ್ಥಾನದಿಂದ ತಂದು ಬೆಂಗಳೂರು ಸರ್ಕಾರಿ ಮ್ಯೂಜಿಯಂನಲ್ಲಿಟ್ಟ ವೀರಗಲ್ಲು

ಶಾಸನ ಪಾಠ

೧. ಸ್ವಸ್ತಿ ಸಮಸ್ತಭುವನವಿನೂತ ಗಙ್ಗಕುಳಗಗನನಿರ್ಮ್ಮಳತಾರಾಪತಿ ಜಳಧಿಜಳ
ವಿಪುಳವಳಯಮೇಖಳಕಳಾಪಾಳಂ

೨. ಕ್ರಿತ್ಯೈಳಾಧಿಪತ್ಯಲಕ್ಷ್ಮೀಶ್ವಯಂವೃತಪತಿತಾಳ್ವಾದ್ಯಗಣಿತಗುಣಗಣವಿಭೂಷಣ
ವಿಭೂಷಿತವಿಭೂತಿ ಶ್ರೀಮದೆಱೆಯಪ್ಪರಸರ್

೩. ಪಗೆವರೆಲ್ಲಮಂ ನಿಕ್ಷತ್ರಮ್ಮಾಡಿ ಗಙ್ಗವಾಡಿತೊಮ್ಭತ್ತಱು ಸಾಸಿರಮುಮನೇಕ
ಛತ್ರಚ್ಛಾಯೆಯೊಳಾಳುತ್ತಮಿಟ್ಟ್ದು ಬೀರಮ-

೪.ಹೇನ್ದ್ರನೊಳ್ಕಾದಲೆನ್ದು ಅಯ್ಯಪದೇವಙ್ಗೆ ಸಾಮನ್ತಸಹಿತಂ ನಾಗತ್ತರನಂ
ಹಣ್ಣುವೇೞ್ದೊಡೆ ತುಮ್ಬೆಪಾದಿಯೊಳ್ಕಾದಿ ಕಾಳೆಗಮಿಮ್ಬ

೫. ಱಿದೊಡೆ ಆನೆಯೊಳಾನ್ತಿಱಿದು ಸತ್ತೊಡದಂ ಕೇಳ್ದೆಱೆಯಪಂ ಮೆಚ್ಚಿ
ಇರುಗಙ್ಗೆ ನಾಗತ್ತರವಟ್ಟಂಗಟ್ಟಿ ಬೆಂಪೂರ್ಪ್ಪನ್ನೆರಡು

೬. ಮಂ ಸಾಸನ ಬದ್ಧಂ ಕಲ್ನಾಡಿತ್ತನವಾವುವೆನ್ದೊಡೆ ॥ಬೆಂಪೂರು॥ ತೊವಗೂರು।
ಪೂವಿನಪುಲ್ಲಿಮಙ್ಗಲ ಕೂತನಿಡುನಲ್ಲೂರು।

೭. ನಲ್ಲೂರು। ಕೊಮ-

೮. ರಙ್ಗನ್ದು ॥ಇ-

೯. ಗ್ಗಲೂರು ॥ಡು

೧೦.ಗ್ನೊನೆಲ್ಮಲ್ಲಿ-

೧೧.ಗಳಂಜವಾ-

೧೨.ಗಿಲೂ

೧೩.ಸಾಱಿಮು

೧೪.ಎಮ್ಮಿಕಣ್ಡೇ ಪರವೂರು

೧೫.ಕೊಡಲೆ। ಇನಿತುಮ

೧೬.ಪೊಲಮೇರೆ ಸಹಿತ

೧೭.ಮಿತ್ತನೆಱೆಯಪಂ

೧೮.ಶವುಚರನ್ನಾಗ[ತ್ತ]ರಂ

೧೯.ಜ್ಗೆಮಙ್ಗಳಮಹಾಶ್ರೀ

ಎಪಿಗ್ರಾಫಿಯಾ ಕರ್ನಾಟಿಕ ix ಬೆಂಗಳೂರು ಸಂಖ್ಯೆ-೮೩

**ಸಾರಾಂಶ :-**

ನಾಗತ್ತರನೆಂಬ ಯೋಧ ತುಮ್ಬೆಪಾಡಿ ಯುದ್ಧದಲ್ಲಿ ವೀರಯೋಧನಂತೆ ಕಾದಾಡಿ ಆನೆಯಿಂದ ಸಾವಿಗೊಳಗಾಗುತ್ತಾನೆ. ಇದನ್ನು ತಿಳಿದ ಗಂಗ ಕುಲದ ರಾಜ ಎಱೆಯಪ್ಪ (ಎಱೆಗಂಗ) ನಾಗತ್ತರನ ಸಾಹಸ ಪರಾಕಾಷ್ಠತೆಯನ್ನು ಮೆಚ್ಚಿ ನಾಗತ್ತರನ ಮಗನಾದ ಇರುಗನಿಗೆ 'ಬೆಂಪೂರ್ಪ್ಪನ್ನೆರಡು' ಪ್ರದೇಶವನ್ನು ಬಿಟ್ಟುಕೊಟ್ಟನು ಎಂಬುದು ಶಾಸನದ ಮುಖ್ಯ ವಿಷಯವಾಗಿದೆ.

**ಶಾಸನದ ವಿಶೇಷ:-**

ಶಾಸನವು ಮುಖ್ಯವಾಗಿ ಕೇವಲ ಬರವಣಿಗೆ ಮಾತ್ರವಲ್ಲದೆ ಅದರೊಂದಿಗೆ ಸುಂದರವಾದ ಶಿಲ್ಪವನ್ನು ಒಳಗೊಂಡಿದ್ದು ಬಹು ಪ್ರಾಮುಖ್ಯತೆಯನ್ನು ಪಡೆದಿದೆ. ಈ ಶಾಸನ ಶಿಲ್ಪವು ತಾಂತ್ರಿಕವಾಗಿ ಉಬ್ಬುಶಿಲ್ಪದ ಒಂದು ಪ್ರಕಾರವಾಗಿದ್ದು "ಕೋಲಾರ, ಬೆಂಗಳೂರು ಮತ್ತು ತುಮಕೂರು ಪ್ರದೇಶದ ಪರಿಸರದಲ್ಲಿ ದೊರೆಯುವ ಗಂಗರ ಶಾಸನಗಳು ಶಾಸನ ಶಿಲ್ಪದ ಬೆಳವಣಿಗೆಯಲ್ಲಿ ಮೊದಲ ಹೆಜ್ಜೆಗಳೆಂದು ಹೇಳಬಹುದು"[3] ಆದರೆ ಗಂಗರ ಕ್ಷೇತ್ರ ಹಾಗೂ ಅವರಿಗೆ ಸಿಕ್ಕಿರುವ ಸಂಪನ್ಮೂಲ ಮುಖ್ಯವಾಗಿ ಅವರ ಶಾಸನದ ಪ್ರಕಾರವನ್ನು ನಿರ್ಧರಿಸಿದ್ದು, ಇವರಿಗೆ ಗಡುಸಾದ ಕಲ್ಲು ಸಿಕ್ಕಿತ್ತೆ ವಿನಃ ಹೊಯ್ಸಳರಂತೆ ಬಳಪದ ಕಲ್ಲು ಸಿಕ್ಕಿರಲಿಲ್ಲ. ಆದ್ದರಿಂದ ಹೆಚ್ಚು ನಾಜೂಕಾದ ಕುಸುರಿ ಕೆಲಸ ಮಾಡಲು ಸಾಧ್ಯವಾಗುತ್ತಿರಲಿಲ್ಲ. ಸಿಕ್ಕ ಗಡುಸಾದ ಕಲ್ಲಿನಲ್ಲಿಯೇ ಸಂಪೂರ್ಣ ಶಾಸನಶಿಲ್ಪವನ್ನು ಪೂರ್ತಿಗೊಳಿಸಬೇಕಾಯಿತು. ಇವರ ಕಾಲದ ಸ್ಮಾರಕ ಶಿಲೆಗಳ ಚಿತ್ರಣದಲ್ಲಿ ಒಂದು ನಿಶ್ಚಿತ ಕ್ರಮವಿಲ್ಲ. ಅಲ್ಲದೇ ಅವರು ಬಳಸಿರುವ ಶಿಲೆಯೂ ಒರಟು ಹಾಗೂ ಆ ಶಿಲೆಗಳು ಇಂತಹದ್ದೇ ಆಕಾರದಲ್ಲಿರಬೇಕು ಎಂಬ ನಿಯಮವು ಇಲ್ಲ. ವೀರನನ್ನು ದೊಡ್ಡದಾಗಿ ಚಿತ್ರಿಸಿ ಮಿಕ್ಕ ವಿವರಗಳನ್ನು ಯಾವುದಾದರೂ ಒಂದು ಮೂಲೆಯಲ್ಲಿ ಚಿಕ್ಕದಾಗಿ ಚಿತ್ರಿಸಿರುತ್ತಾರೆ. ಈ ರೀತಿಯ ಲಕ್ಷಣವನ್ನು ಹೊಂದಿರುವ ಶಾಸನದ ಕಲ್ಲು ಒರಟಾದರು ಅದನ್ನು ಕೆತ್ತಿರುವ ಶಿಲ್ಪಿಯ ಕಲ್ಪನೆಯನ್ನು ಮಾತ್ರ ಮೆಚ್ಚಲೇಬೇಕಾದ್ದು. ಈ ಶಾಸನದಲ್ಲಿ ಬಹುಚರ್ಚಿತವಾಗುವ ವಿಷಯವೆಂದರೆ 'ಕಲ್ನಾಡು' ಎಂಬ ವಿಚಾರವಾಗಿ.

**ಕಾಲ್ನಾಡು:-**

ಕಾಲ್ನಾಡು ಎಂಬುದು ವೀರಗಲ್ಲುಗಳನ್ನು ನೆಡುವ ವಿಷಯಕ್ಕೆ ಸಂಬಂಧಿಸಿದ್ದಾಗಿದ್ದು. ತಮಿಳುನಾಡಿನಲ್ಲಿ ಹೋರಾಡಿ ಸತ್ತ ವೀರರ ಸ್ಮಾರಕಕ್ಕಾಗಿ ನೆಡುವ ಶಿಲೆಯನ್ನು ಅವರು 'ನಾಟ್ಟುಕಲ್' ಎಂಬುದಾಗಿ ಕರೆಯುತ್ತಾರೆ. ಇಲ್ಲಿ 'ನಾಟ್ಟು' ಎಂಬುದು ನೆಡು, ನೆಟ್ಟ ಎಂಬ ಅರ್ಥದಲ್ಲಿ ಬಳಸಿದರೆ 'ಕಾಲ್' ಎಂಬುದು ಕಲ್ಲು ಎಂಬ ಅರ್ಥದಲ್ಲಿ ಬಳಸುತ್ತಾರೆ. ಅಂದರೆ ವೀರರು ಸತ್ತಾಗ ನೆಡುವ ಕಲ್ಲೆ 'ನಾಟ್ಟುಕಲ್' ಆಗಿದ್ದು ಅದು ವೀರಸ್ಮಾರಕ, ವೀರಕಲ್ಲು ಎಂಬ ಅರ್ಥಗಳನ್ನು ಸೂಚಿಸುತ್ತದೆ. ಅದೇ ರೀತಿಯ ಒಂದು ಚರ್ಚೆ 'ಕಾಲ್ನಾಡು'ಗೆ ಸಂಬಂಧಿಸಿದ್ದು ಈ ವಿಚಾರವಾಗಿ ಡಾ.ಎಂ.ಚಿದಾನಂದಮೂರ್ತಿ ಹಾಗೂ ಡಾ.ಆರ್.ಶೇಷಶಾಸ್ತ್ರಿಯವರು ತಮ್ಮ ಕರ್ನಾಟಕದ ವೀರಗಲ್ಲುಗಳು ಕೃತಿಯಲ್ಲಿ ಚರ್ಚಿಸಿರುವುದನ್ನು ಕಾಣಬಹುದು. ಇವರು ಹೇಳುವಂತೆ "ಸತ್ತ ವೀರನ ಮನೆಯವರಿಗೆ ಕೊಟ್ಟ ದತ್ತಿಯ ಮೇರೆಗಳನ್ನು ಸೂಚಿಸಲು ಕಲ್ಲುಗಳನ್ನು ನೆಡುತ್ತಿದ್ದರು. ಅದರಿಂದ ಆ ದತ್ತಿಯನ್ನು 'ಕಲ್ನಾಡು', 'ಕಲ್ನಾಟು', 'ಕಲ್ನಟ್ಟು' ಎಂದೇ ಕರೆಯುತ್ತಿದ್ದರು"[೪] ಕಲ್ನಾಡು ಎಂಬಲ್ಲಿ ನಾಡು ಎಂಬುದು ಪ್ರದೇಶವನ್ನು, ಕಲ್ಲು ಎಂಬುದು ವೀರಗಲ್ಲನ್ನು ಸೂಚಿಸುವುದಿಲ್ಲವೆಂದು ಭಾವಿಸಬಹುದು. ಆದರೆ ಡಾ.ಕೆ.ವಿ.ರಮೇಶ್‌ರವರು ಹಲ್ಮಿಡಿ ಶಾಸನದ 'ಸಟ್ಟಜ್ಗದರ್' ಮತ್ತು 'ಬಾಳ್ಗಟ್ಚು ಎಂಬ ಲೇಖನದ ಕೊನೆಯ ಭಾಗದಲ್ಲಿ "ಕಾಲ ಬೆಳೆದಂತೆ 'ಬಾಳ್ಗಟ್ಚು ಎಂಬಿ ಪದವು ಬಳಕೆ ತಪ್ಪಿ ಕಲ್ನಡು ಅಥವಾ ಕಲ್ನಾಡು ಅಥವಾ ಕಲ್ನಾಟ್ಟು, ರುಧಿರಮಾನ್ಯ, ರಕ್ತಮಾನ್ಯ, ನೆತ್ತರುಗೈ, ನೆತ್ತರುಕೊಡುಗೆ ಮುಂತಾದ ಪ್ರಯೋಗಗಳು ಕನ್ನಡ ಶಾಸನಗಳಲ್ಲಿ ಬಳಕೆಗೆ ಬಂದವು"[೫] ಎಂಬುದಾಗಿ ಅಭಿಪ್ರಾಯ ಪಡುತ್ತಾರೆ. ಆದರೆ ಡಾ.ಆರ್.ಶೇಷಶಾಸ್ತ್ರೀಯವರು ಹೇಳುವಂತೆ ಬಿಟ್ಟ ದತ್ತಿಯನ್ನು ಸೂಚಿಸುವ ಸಲುವಾಗಿ ಹಾಕುತ್ತಿದ್ದ ಕಲ್ಲುಗಳ ನಡುವಿನ ಪ್ರದೇಶವನ್ನು 'ಕಲ್ನಾಟು' ಎಂದು ಕರೆದಿರುವ ಸಂಭವ ಇದ್ದಿದ್ದರೆ ಇತರೆಯವರಿಗೆ (ಉದಾಹರಣೆ ಬ್ರಾಹ್ಮಣರಿಗೆ) ದೇವಾಲಯಗಳಿಗೆ ಬಿಡುತ್ತಿದ್ದ ದತ್ತಿಗಳಿಗೂ ಮೇರೆಯ ಕಲ್ಲುಗಳನ್ನು ಹಾಕುತ್ತಿದ್ದರಲ್ಲವೇ? ಹಾಗಾದರೆ ಅದನ್ನು ಏಕೆ ಕಲ್ನಾಟು ಎಂಬುದಾಗಿ ಕರೆದಿಲ್ಲ? ಎಂದು ಪ್ರಶ್ನಿಸಿರುವುದು ಸರಿಯಾಗಿಯೇ ಇದೇ ಎಂದು ಹೇಳಬಹುದು.

"ನಾಗತ್ತರನು ಯುದ್ಧದಲ್ಲಿ ಸತ್ತಾಗ ಎಱೆಯಪ್ಪನು ನಾಗತ್ತರನ ಮಗನಾದ 'ಇರುಗನಿಗೆ' ನಾಗತ್ತರ ಪಟ್ಟವನ್ನು ಕಟ್ಟಿ ಬೆಂಪೂರ್ಪ್ಪನ್ನೆರಡುಮಂ ಶಾಸನಬದ್ಧಂ ಕಲ್ನಾಡಿತ್ತ" ಎಂಬುದನ್ನು ನೋಡಿದಾಗ ಆರಂಭದ ಕೆಲವು ಶಾಸನಗಳಲ್ಲಿ ಕಲ್ನಾಡು ಎಂಬುದು ವೀರಗಲ್ಲು ಎಂಬ ಅರ್ಥದಲ್ಲಿಯೇ ಬಳಕೆಯಾಗಿದ್ದು ಉಳಿದ ವೀರಗಲ್ಲುಗಳ ಪಾಠದಲ್ಲಿ 'ದತ್ತಿ'ಎಂಬ ಅರ್ಥ ಬರುವ ಹಾಗೆ ಪ್ರಯೋಗವಾಗಿರುವುದಕ್ಕೆ ಕಾರಣಗಳನ್ನು ಹೀಗೆ ನೀಡಬಹುದು. ಬ್ರಾಹ್ಮಣರಿಗೆ ಅಗ್ರಹಾರಗಳನ್ನು ದತ್ತಿ ಬಿಡುವಾಗ ತಾಮ್ರಶಾಸನದೊಂದಿಗೆ ದತ್ತಿಯನ್ನು ನೀಡುತ್ತಿದ್ದಂತೆಯೇ ಯಾವುದೇ ಹೋರಾಟದಲ್ಲಿ ಮಡಿದ ವೀರನ ಮನೆಯವರಿಗೆ ದತ್ತಿಯನ್ನು ನೀಡುವಾಗ ವೀರನ ಸ್ಮಾರಕಶಿಲೆಯ ಮೇಲೆಯೇ ದತ್ತಿಯ

ವಿವರಗಳನ್ನು ಬರೆಯುತ್ತಿದ್ದರು. ಈ ಅಂಶ ಬೇಗೂರಿನ ಯುದ್ಧಚಿತ್ರಣವಿರುವ ವೀರಗಲ್ಲಿನಿಂದ ಹೆಚ್ಚು ಸ್ಪಷ್ಟವಾಗುತ್ತದೆ. ನಾಗತ್ತರನ ಕಾಲ್ನಾಡು ನಿಲ್ಲಿಸುವ ಎಚೆಯಪ್ಪನು ನಾಗತ್ತರನ ಮಗನಾದ ಇರುಗನಿಗೆ ಶಾಸನಬದ್ಧಂ ಕಾಲ್ನಾಡಿತ್ತನ್ ಎಂಬುದಾಗಿ ತಿಳಿಯುತ್ತದೆ. ಈ ವಾಕ್ಯವನ್ನು ಎಚೆಯಪ್ಪನು ಇರುಗನಿಗೆ ಅವನ ತಂದೆಯ ವೀರಗಲ್ಲಿನಲ್ಲಿಯೇ (ಕನ್ನಾಡಿನಲ್ಲಿಯೇ) ದತ್ತಿಯ ವಿವರಗಳನ್ನು ಬರೆಯಿಸಿಕೊಟ್ಟ ಎಂಬುದಾಗಿ ಅರ್ಥೈಸಬೇಕಾಗುತ್ತದೆ. ಸತ್ತ ವೀರರಿಗೆ ಬಿಡುತ್ತಿದ್ದ ವಿವರಗಳು ಸತ್ತ ವ್ಯಕ್ತಿಯ ಮಕ್ಕಳು ಪಡೆದ ದತ್ತಿಯ ವಿವರಗಳನ್ನೇ ಹೊಂದಿರುವುದರಿಂದ ಅವುಗಳನ್ನು ಕನ್ನಾಡುದತ್ತಿ ಎಂಬುದಾಗಿ ಕರೆದಿರುವುದುಂಟು.

ಪ್ರಾಚೀನ ಕಾಲದ ಯುದ್ಧಗಳಲ್ಲಿ ಗಜಸೇನೆ, ಅಶ್ವಸೇನೆ, ಪದಾತಿದಳಗಳು ಮುಖ್ಯವಾಗಿ ಕಂಡುಬರುತ್ತಿದ್ದವು. ಯುದ್ಧದಲ್ಲಿ ಈ ದಳಗಳು ಸಕ್ರಿಯವಾಗಿ ಪಾಲ್ಗೊಂಡು ಜಯವನ್ನು ತಂದುಕೊಡುವ ಕಾರ್ಯವನ್ನು ಮಾಡುತ್ತಿದ್ದರು. ಈ ಹಿನ್ನೆಲೆಯಲ್ಲಿ ಬೇಗೂರಿನ ಯುದ್ಧಚಿತ್ರಣವನ್ನು ಗಮನಿಸಿದಾಗ ಶಿಲ್ಪಿಯ ಸ್ವತಂತ್ರತೆ ಎದ್ದುಕಾಣುತ್ತದೆ.

ಶಿಲ್ಪಿಯು ತನ್ನ ಕೌಶಲ್ಯಕ್ಕೆ ಸೃಜನಶೀಲತೆಗೆ ಕೆಲಸ ನೀಡಿದಂತೆ ಭಾಸವಾಗುವ ಶಾಸನಶಿಲ್ಪ ಅತ್ಯಪೂರ್ವವೂ, ಪರಿಣಾಮಕಾರಿ ಶಿಲ್ಪಕಲಾಕೃತಿಗಳಾಗಿವೆ. ಶಿಲ್ಪದಲ್ಲಿ ಚಲನೆ ಮತ್ತು ಕ್ರಿಯೆಯನ್ನು ಬಹಳ ಸಮರ್ಥವಾಗಿ ಹಿಡಿದಿಟ್ಟಿದ್ದಾರೆ. ಯುದ್ಧದಲ್ಲಿ ಭಾಗವಹಿಸುವ ದಳಗಳ ಮೂಲಕ ಈ ಒಂದು ಶಾಸನಶಿಲ್ಪವನ್ನು ಪರಿಶೀಲಿಸಿದಾಗ ಯಾವುದೇ ಒಂದು ಯುದ್ಧಕ್ಕೆ ಕಾಲಾಳುಗಳು ಬಹುಮುಖ್ಯ ಪಾತ್ರವನ್ನು ವಹಿಸುತ್ತಾರೆ. ಅವರ ರೀತಿನೀತಿ: ವೇಷ–ಭೂಷಣ ಅವರು ಬಳಸುತ್ತಿದ್ದ ಆಯುಧಗಳನ್ನು ಗಮನಿಸುತ್ತಿದ್ದಾಗ ವೀರರು ತಮ್ಮ ಕೂದಲನ್ನು ಕೆದರದಂತೆ ಬಟ್ಟೆಯಿಂದ ಕಟ್ಟಲಾಗಿರುತ್ತದೆ. ಒಂದು ಮುಖ್ಯ ಅಂಶ ಗಮನಿಸಬೇಕು. ಪ್ರಾಚೀನ ಕಾಲದಲ್ಲಿ ಗಂಡಸರು–ಹೆಂಗಸರು ಇಬ್ಬರೂ ಸಹ ಅಂದವಾದ ಉದ್ದವಾದ ಕೂದಲನ್ನು ಬೆಳೆಸುತ್ತಿದ್ದರು ಎಂಬುದಕ್ಕೆ ಶಾಸನಗಳಲ್ಲಿ ನಿದರ್ಶನಗಳು ಸಿಗುತ್ತವೆ. ಹಾಗೆಯೇ ಈ ಶಾಸನದಲ್ಲಿ ಸೈನಿಕರು ಕೂದಲನ್ನು ಸುಂದರವಾಗಿ ಕಾಣುವಂತೆ ಬಟ್ಟೆಯಿಂದ ಕಟ್ಟಿಕೊಂಡು ಯುದ್ಧ ಮಾಡುತ್ತಿರುವುದನ್ನು ಕಾಣಬಹುದು. ಇಲ್ಲಿ ಕಾಲಾಳುವಿನ ಜೊತೆಗೆ ಆನೆಯ ಮತ್ತು ಕುದುರೆಯ ಮೇಲಿನ "ಮೇಲಾಳು"ಗಳು ಸಹ ಇದೆ ರೀತಿಯ ಪರಿಯನ್ನು ಅನುಸರಿಸಿರುವುದು ಕಂಡುಬರುತ್ತದೆ. ಇಲ್ಲಿ ಸೈನಿಕರನ್ನು ಬಹುಸುಂದರವಾಗಿ ಕೆತ್ತಿರುವುದು ಗಮನಿಸಬಹುದ.

ಬೇಗೂರಿನ ಯುದ್ಧಚಿತ್ರಣದ ವೀರಗಲ್ಲಿನಲ್ಲಿ ಕಾಣುವ ಮತ್ತೊಂದು ವಿಷಯವೆಂದರೆ 'ಕುದುರೆದಳ' ಯುದ್ಧದಲ್ಲಿ ಕುದುರೆಗಳ ಮೇಲೆ ಕುಳಿತು ಯುದ್ಧ ಮಾಡುತ್ತಿದ್ದು ಬಿಲ್ಲು ಬಾಣಗಳನ್ನು ಬಳಸುತ್ತಿದ್ದರು. ಖಡ್ಗ, ಇತ್ಯಾದಿ. ಆದರೆ ಎಲ್ಲಾ ಸಂದರ್ಭದಲ್ಲಿಯೂ ಸಹ ಕುದುರೆಗಳ ಮೇಲೆ ಕುಳಿತೇ ಯುದ್ಧ ಮಾಡಲು ಸಾಧ್ಯವಾಗುತ್ತಿರಲಿಲ್ಲ. ಆಗ ಕುದುರೆಯಿಂದ ಇಳಿದು ಯುದ್ಧ ಮಾಡಬೇಕಾಗುತ್ತದೆ. ಈ

ವೀರಗಲ್ಲಿನಲ್ಲಿ ಕುದುರೆ ಒತ್ತಟ್ಟಿಗೆ ನಿಂತಿರುವಂತೆ ಬಿಡಿಸಲಾಗಿದೆ. ವೀರ ಅದರಿಂದ ಇಳಿದು ನಡೆಯುತ್ತಾ ರಣರಂಗದಲ್ಲಿ ಹೋರಾಡಲು ನಡೆಯುತ್ತಿದ್ದಾನೇನೋ ಎನ್ನುವಂತೆ ಗುರಾಣಿ ಮತ್ತು ಕತ್ತಿಯನ್ನು ಹಿಡಿದು ಹೋಗುತ್ತಿರುವುದು ಕಾಣಬಹುದು.

ಈ ಶಿಲ್ಪ ಶಾಸನದ ಕೇಂದ್ರ ಬಿಂದು ಆನೆ ಯುದ್ಧದಲ್ಲಿ ಪಾಲ್ಗೊಂಡಿರುವ ದೃಶ್ಯ. ಶಿಲ್ಪದಲ್ಲಿ ನಾಗತ್ತರನ ಕಡೆಯವರು ಬಿಟ್ಟ ಬಾಣಗಳು ಶತ್ರುಪಕ್ಷದವರ ಆನೆಯ ಮುಖ ಭಾಗದಲ್ಲಿ ನಾಟಿವೆ. ಆದರೆ ಕುಂಭಸ್ಥಳದ ಭಾಗದಲ್ಲಿ ನಾಟಿಲ್ಲ. ಆನೆಯ ಹೊಟ್ಟೆಯ ಭಾಗವನ್ನು ಎರಡು ಕಡೆಯಲ್ಲಿ ಮುಚ್ಚುವಂತೆ 'ಲೋಹರಕ್ಷಕ'ಗಳನ್ನು ಕಟ್ಟುತ್ತಿದ್ದರು. ಆ ಒಂದು ಲೋಹವಕ್ಕರೆಯನ್ನು ಶಿಲ್ಪದಲ್ಲಿ ಕಾಣಬಹುದು. ಜೊತೆಗೆ ಆನೆಗೆ ಗಂಟೆಗಳ ಸರಮಾಲೆಯೇ ಕಟ್ಟಲಾಗಿದೆ. ಆನೆ ಎಷ್ಟೇ ಬಲಶಾಲಿಯಾದರೂ ಸೈನಿಕರು ಸತತವಾಗಿ ಬಾಣಗಳನ್ನು ಬಿಡುವ ಮೂಲಕ ಆನೆಯನ್ನು ಕೊಲ್ಲುವ ಸಾಹಸದಲ್ಲಿ ನಿರತರಾಗಿರುವುದನ್ನು ಕಾಣಬಹುದು. ಒಂದು ಆನೆ ತನ್ನ ಸೊಂಡಲಿನಿಂದ ಒಬ್ಬನನ್ನು ಹಿಡಿದು ಸಾಯಿಸಿ ಎಸೆಯುತ್ತಿದೆ. ಕೆಲವು ವಿದ್ವಾಂಸರು ಆನೆಯಿಂದ ಸತ್ತ ನಾಗತ್ತರನನ್ನು ಶಿಲ್ಪಿ ಶಾಸನದಲ್ಲಿ ಕೆತ್ತಿದ್ದಾನೆ ಎಂದು ಹೇಳುತ್ತಾರೆ. ಆದ್ದರಿಂದ ಆನೆಯಿಂದ ಸಾವಿಗೆ ಒಳಗಾಗುತ್ತಿರುವ ವೀರ ನಾಗತ್ತರನಾಗಿದ್ದಾನೆ ಎಂದು ಭಾವಿಸಬಹುದು.

ಇನ್ನು ಈ ಶಿಲ್ಪದಲ್ಲಿ ಧ್ವಜಗಳನ್ನು ಸುಂದರವಾಗಿ ಬಿಡಿಸಿದ್ದು ಯುದ್ಧದ ಸಮಯದಲ್ಲಿ ಧ್ವಜವು ಅಸ್ತಿತ್ವ ಮತ್ತು ಪ್ರಾಬಲ್ಯದ ಸಂಕೇತವಾಗಿ ಕಾಣಬಹುದು. ಈ ಧ್ವಜವು ಯುದ್ಧರಂಗದಲ್ಲಿ ತಮ್ಮ ಕಡೆಯ ಯೋಧರು ಯಾರು, ಯಾವ ಕಡೆಯಿಂದ ಯುದ್ಧ ಮಾಡುತ್ತಿದ್ದಾರೆ ಎಂದು ಗುರುತಿಸಲು ಸಹಾಯವಾಗುತ್ತದೆ ಮತ್ತು ಸೋತ ಸೈನಿಕರಿಂದ ಧ್ವಜವನ್ನು ಕಸಿದುಕೊಂಡು ಗೆದ್ದವರು ಧ್ವಜವನ್ನು ಹಾರಿಸುವುದರಿಂದ ಯುದ್ಧ ಯಾರ ಪರವಿದೆ ಎಂದು ನಿರ್ಧರಿಸಲು ಸುಲಭವಾಗುವುದರಿಂದ ಧ್ವಜ ಯುದ್ಧದಲ್ಲಿ ಪ್ರಾಮುಖ್ಯ ಪಡೆದಿದೆ. ಬೇಗೂರು ಶಿಲ್ಪಶಾಸನದಲ್ಲಿ ಧ್ವಜವನ್ನು ಕೆಲವು ಸೈನಿಕರು ಹಿಡಿದಿದ್ದು ಇನ್ನು ಕೆಲವು ಕಡೆ ಆನೆಯ ಅಂಬಾರಿಗೆ ಕಟ್ಟಿರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಶಿಲ್ಪವನ್ನು ನೋಡಿದಾಗ ಶಿಲ್ಪಿ ತನ್ನ ವೈಯಕ್ತಿಕ ಜೀವನಾನುಭವವನ್ನು ಆ ವೀರಗಲ್ಲಿನಲ್ಲಿ ಹಿಡಿದಿಟ್ಟಿದ್ದಾನೆ. ಅವನು ಯುದ್ಧರಂಗದ ಭಯದ ವಾತಾವರಣವನ್ನು ಸಮರ್ಥವಾಗಿ ಹಿಡಿದಿಟ್ಟಿದ್ದಾನೆ. ಒಂದು ಆನೆ ತನ್ನ ಸೊಂಡಲಿನಿಂದ ಒಬ್ಬ ವ್ಯಕ್ತಿಯನ್ನು ಎಸೆಯುತ್ತಿದೆ. ರುಂಡ ಕಳೆದ ಮುಂಡಗಳು ಹೋರಾಡುತ್ತಿವೆ. ಆಗಷ್ಟೇ ಸತ್ತು ಬಿದ್ದಿರುವ ವೀರನ ಕಣ್ಣುಗಳನ್ನು ಕಾಗೆಯೊಂದು ಕುಕ್ಕುತ್ತಿದೆ. ಗಾಯಗೊಂಡು ಅಸಹಾಯಕರಾದ ವೀರರನ್ನು ಪರಿಚಾರಕರು ಹೊತ್ತು ಸಾಗಿಸುತ್ತಿದ್ದಾರೆ. ಇದೇ ತಮಗೆ ಸುಸಮಯವೆಂದು ಭಾವಿಸಿದ ಪಿಶಾಚಿಗಳು ಮಡಿದ ವೀರರ ರಕ್ತವನ್ನು ಕುಡಿಯುತ್ತಿವೆ.

ಈ ಕಲ್ಲಿನಲ್ಲಿ ಶಿಲ್ಪಿ ನಾಗತ್ತರ ಪರಾಕ್ರಮವನ್ನು ಸಮರ್ಥವಾಗಿ ನಿರೂಪಿಸಿದ್ದಾನೆ. ಯುದ್ಧದ ಪರಿಣಾಮಗಳನ್ನು ತೀವ್ರವಾಗಿ ಅನುಭವಿಸಿದ ಶಿಲ್ಪಿ ಅದರ ಘೋರ ರೂಪವನ್ನು ಎತ್ತಿ ಹೇಳುತ್ತಿರುವಂತಿದೆ.

ಈ ವೀರಗಲ್ಲನ್ನು ಮಾಡಿದ ಶಿಲ್ಪಿ ಯಾರು ಎಂಬುದು ತಿಳಿಯದು. ಅವನು ಯಾರೇ ಆಗಿರಲಿ ಜೀವನವನ್ನು ತೀವ್ರವಾಗಿ ಅನುಭವಿಸಿ ಅದಕ್ಕೆ ತುಂಬಿದ್ದಾನೆ. ತನ್ನ ಹೃದಯದ ಸಂವೇದನೆಯನ್ನು ತನಗೆ ದೊರೆತ ಅವಕಾಶದಲ್ಲಿ ಸಮರ್ಥವಾಗಿ ಅಭಿವ್ಯಕ್ತಿಗೊಳಿಸಿರುವ ಶ್ರೇಷ್ಠ ಕಲಾವಿದ ಎಂಬುದರಲ್ಲಿ ಸಂಶಯವಿಲ್ಲ. ಈ ಶಿಲ್ಪದ ಮತ್ತೊಂದು ವಿಶೇಷವೆಂದರೆ "ಕರ್ನಾಟಕದ ಯಾವ ವೀರಗಲ್ಲುಗಳಲ್ಲಿಯೂ ಮರುಳಗಳನ್ನು ಬಿಡಿಸಿಲ್ಲ. ಆದರೆ ಬೇಗೂರು ವೀರಗಲ್ಲಿನಲ್ಲಿ ಮಾತ್ರ ಅದನ್ನು ಕಾಣಬಹುದು"[2] ಎಂದು ಡಾ.ಆರ್.ಶೇಷಶಾಸ್ತ್ರೀಯವರು ತಿಳಿಸಿರುವುದು ಇದರ ಮಹತ್ವವನ್ನು ತಿಳಿಸುತ್ತದೆ. ಇಂದಿನ ಯುಗದಲ್ಲಿ ಪ್ರತಿಯೊಂದು ರಾಷ್ಟ್ರವೂ ಸಹ ಮಾನವನಿಗೆ ಮಾರಕವಾಗುವ ಅಣುಪರೀಕ್ಷೆಗಳು ನಡೆಸುತ್ತಲೇ ಇವೆ. ಒಂದು ರಾಷ್ಟ್ರ ಇನ್ನೊಂದು ರಾಷ್ಟ್ರದ ನಿರ್ನಾಮದ ಬಗ್ಗೆಯೇ ಯೋಚಿಸುವ, ದ್ವೇಷ ರಾಜಕಾರಣ ಮಾಡುತ್ತಿದೆ. ಇಂತಹ ಸಂದರ್ಭದಲ್ಲಿ ಬೇಗೂರು ಶಾಸನದಂತಹ ಒಂದು ಉಪಯುಕ್ತ ಸಂದೇಶವನ್ನು, ನಾಶದ ಭೀಕರತೆಯನ್ನು ಸ್ಮರಿಸಿಕೊಂಡು ಶಾಂತಚಿತ್ತವಾಗಿ ಸಾಗುವ ಯೋಚನೆ ಮಾಡುವುದು ಅವಶ್ಯಕವೆನಿಸುತ್ತದೆ. ಆದ್ದರಿಂದ 'ಬೇಗೂರು ವೀರಗಲ್ಲು' ಸರ್ವಕಾಲಕ್ಕೂ ಬಹುದೊಡ್ಡ ಮೌಲ್ಯವನ್ನು ಬಿಂಬಿಸುವ ಮಾದರಿ ಶಿಲ್ಪವಾಗಿ ನಿಲ್ಲುತ್ತದೆ.

## ೪.೨ : ಬೆಂಗಳೂರು ಪದದ ನಿಷ್ಪತ್ತಿಗೆ ಮೂಲ ಆಕರವಾಗಿ ಬೇಗೂರು ಶಾಸನ

**ಊರು** : ಬೇಗೂರು — **ರಾಜಮನೆತನ** : ಗಂಗರು

**ತಾಲ್ಲೂಕು** : ಬೆಂಗಳೂರು ದಕ್ಷಿಣ — **(ಮಾಂಡಲಿಕ)ರಾಜ** : ನಾಗತ್ತರ

**ಜಿಲ್ಲೆ** : ಬೆಂಗಳೂರು — **ಕಾಲ** : ಕ್ರಿ.ಶ.ಸು.೮೯೦

**ಸ್ಥಳ** : ಬೇಗೂರು ನಾಗೇಶ್ವರ ದೇವಾಲಯದ ಆವರಣದಲ್ಲಿದೆ

**ಶಾಸನ ಪಾಠ :-**

೧. ಶ್ರೀಮತ್ ನಾಗತ

೨. ರನ ಮನೆ ವಗ

೩. ತಿ ಪೆರ್ವೊಣ ಶಟ್ಟಿ

೪. ಬೆಂಗುಳೂರು ಕಾಳೆ

೫. ಗದೊಳ್ ನಾಗ

೬. ತರನ ಮಗಂ ಬುಟ್ಟಣ

೭. ಪತಿ ಸತ್ತಂ

**ಸಾರಾಂಶ** :-ಎಱೆಯಪ್ಪನಿಂದ 'ಬೆಂಪೂರು-೧೨'ರ ಭಾಗವನ್ನು ದತ್ತಿಯಾಗಿ ಪಡೆದಿದ್ದ ನಾಗತ್ತರನ ವಂಶದವರು ಕಾಲ ಕಳೆದಂತೆ ನಾಗತ್ತರನ ಮಗನಾಗಿದ್ದ ಬುಟ್ಟಣಶೆಟ್ಟಿಯ ಅಧೀನಕ್ಕೆ ಒಳಪಟ್ಟಿತು. ಬುಟ್ಟಣಶೆಟ್ಟಿ (ಪತಿ) ಬೆಂಗಳೂರು ಕಾಳಗದೊಳ್ ಸತ್ತ ಎನ್ನುವ ವಿಷಯವನ್ನು ಕುರಿತಾದ ವೀರಗಲ್ಲು.

**ಶಾಸನದ ವೈಶಿಷ್ಟ್ಯ :-**

ಈ ಮೇಲಿನ ವೀರಗಲ್ಲಿನ ಮುಖ್ಯ ವಿಶಿಷ್ಟತೆ ಬೆಂಗುಳೂರು ಪದದ ಪ್ರಯೋಗವನ್ನು ಕುರಿತದ್ದಾಗಿದೆ. ಮೊದಲಿನಿಂದ ತಿಳಿದುಬಂದಂತೆ ಬೆಂಗಳೂರಿಗೆ 'ಬೆಂದಕಾಳೂರು' ಎಂಬ ಹೆಸರಿದ್ದು ಕಾಲಾಂತರದಲ್ಲಿ ಉಚ್ಚಾರಣೆಯ ಸೌಲಭ್ಯದಿಂದ ಬೆಂಗಳೂರು ಆಯಿತು ಎಂಬ ಒಂದು ಐತಿಹ್ಯವಿದೆ. ಹೊಯ್ಸಳರ-ವೀರಬಲ್ಲಾಳ (೧೧೭೩-೧೨೨೦) ಬೇಟೆಗೆಂದು ಈ ಪ್ರದೇಶಕ್ಕೆ ಬಂದಾಗ ಅವನು ಹಸಿದಿದ್ದ ತನ್ನ ಪರಿವಾರದಿಂದ ಅಗಲಿದ್ದರಿಂದ ಅವನಿಗೆ ದಾರಿ ಕಾಣದಾಗಿತ್ತು. ಆಗ ಅವನಿಗೆ ಒಂದು ಹಳ್ಳಿಯಲ್ಲಿ ಮುದುಕಿಯು ವಾಸವಿದ್ದ ಒಂದು ಗುಡಿಸಲು ಕಾಣಿಸಿತು. ಅಲ್ಲಿಗೆ ಬಂದ ವೀರಬಲ್ಲಾಳ ತನ್ನ ವ್ಯಥೆಯನ್ನು ಮುದುಕಿಯ ಬಳಿ ಹೇಳಿಕೊಂಡ, ಇದರಿಂದ ಅನುಕಂಪ ತೋರಿದ ಮುದುಕಿ ಬೆಂದಕಾಳುಗಳನ್ನು ತಿನ್ನಲು ಕೊಟ್ಟಳಂತೆ. ಕಾಳುಗಳನ್ನು ಸವಿದ ಬಲ್ಲಾಳನು ದಣಿವನ್ನು ನೀಗಿಸಿಕೊಂಡು ಸಂತುಷ್ಟನಾಗಿ ಆ ಹಳ್ಳಿಯನ್ನು 'ಬೆಂದಕಾಳೂರು' ಎಂದು ಕರೆದ. ಅದೇ ಮುಂದೆ ಬೆಂಗಳೂರು ಆಯಿತು ಎಂಬುದು ವಾದ.

ಮತ್ತೊಂದು ಪಂಥ ಬೆಂಗಳೂರಿನ ಸುತ್ತಲೂ ಬೆಣಚುಕಲ್ಲು ಅಧಿಕವಾಗಿ ದೊರೆಯುತ್ತಿದ್ದರಿಂದ 'ಬೆಣಚುಕಲ್ಲೂರು' ಎಂದು ಕರೆಯಲ್ಪಟ್ಟು ಮುಂದೆ ಬೆಂಗಳೂರು ಆಯಿತು ಎಂಬ ವಾದವಿದೆ. ಆದರೆ ಈ ರೀತಿಯ ಸ್ಥಳನಾಮದ ಬಗ್ಗೆ ಹೇಳಲು ಬೇರೆ ಯಾವುದೇ ಆಧಾರ ಸಿಗದ ಕಾರಣ ಈ ವಾದವನ್ನು ಸಹ ಒಪ್ಪಲು ಸಾಧ್ಯವಿಲ್ಲ.

ಬೆಂಗಳೂರು ಪರಿಸರದಲ್ಲಿ ರಕ್ತಹೊನ್ನೆ ಮರಗಳು ಅಧಿಕವಾಗಿದ್ದರಿಂದ ಅದನ್ನು ಹಳಗನ್ನಡದಲ್ಲಿ 'ಬೇಂಗ', 'ಬೆಂಗ' ಎಂದು ತಮಿಳಿನಲ್ಲಿ 'ವೇಂಗ' ಎನ್ನುತ್ತಾರೆ. ಬೇಂಗ ಅಥವಾ 'ರಕ್ತಹೊನ್ನೆ' ಎಂಬ ಸಸ್ಯದಿಂದ 'ಬೇಂಗ ಊರು' ಆಗಿ ಬೆಂಗಳೂರು ಆಗಿರಬೇಕು. ಸಾಮಾನ್ಯವಾಗಿ ಊರು ಮತ್ತು ವ್ಯಕ್ತಿ ನಾಮಗಳು ಆರಂಭದ ಅಕ್ಷರದ ದೀರ್ಘವು ನಂತರ ಸೊನ್ನೆ ಬಂದಾಗ ಆಡುಮಾತಿನಲ್ಲಿ ಕಣ್ಮರೆಯಾಗಿ ಬೇಂಗ ಪದ 'ಬೆಂಗ' ಆಗಿ ಬೆಂಗಳೂರು ಆಯಿತು ಎನ್ನುವ ವಾದ.

ಇನ್ನೊಂದು ವಾದವೂ ಇದೆ. ಇದು "ಗಂಗರ ಕಾಲದಲ್ಲಿ ಬೆಂಗಾವಲೂರು ಆಗಿ ಮುಂದೆ ಬೆಂಗಳೂರು ಆಗಿತ್ತು ಎಂಬ ಹೇಳಿಕೆ"[೮] ಆದರೆ ಹೀಗೆ ಹೇಳಲು ಯಾವುದೇ ಲಿಖಿತ ಆಧಾರವಿಲ್ಲ. ಗಂಗರ ಕಾಲದಲ್ಲಿ ಈ ಪರಿಸರದಲ್ಲಿ ಬೇಗೂರು(ಬೆಂಪೂರು)ಒಂದು ಗಣ್ಯ ಕೇಂದ್ರವಾಗಿತ್ತು. 'ಅಗರ', 'ಇಬ್ಬಲೂರು' ಇತರ ಆಗಿನ ಹಳ್ಳಿಗಳಾಗಿದ್ದು ಬೇರಾವ ಗಣ್ಯ ಊರು ಇಲ್ಲಿ ಬೆಂಗಾವಲಿನ ಊರಾಗಿರಲಿಲ್ಲ. ಆದ್ದರಿಂದ ಈ ವಾದವನ್ನು ಸಹ ಒಪ್ಪಲು ಸಾಧ್ಯವಿಲ್ಲ.

ಮತ್ತೊಂದು ಪಂಥ 'ದೇವರಾಯಪಟ್ಟಣ' ಎಂಬುದೇ ಬೆಂಗಳೂರು ಸ್ಥಳನಾಮದ ಮೂಲ ಎಂದು ಹೇಳುತ್ತಾರೆ. ಈ ವಾದದಂತೆ ಈಗಿರುವ ಬೆಂಗಳೂರು ಪ್ರದೇಶವು ಮೊದಲಿಗೆ ಬೆಂಗಾಡಾಗಿದ್ದು, ಗಿಡಮರಗಳು ಬೆಳೆಯದ ಬೆಟ್ಟಗುಡ್ಡಗಳಿಂದ ಕೂಡಿದ ಸಮತಟ್ಟಾಗಿಲ್ಲದ ಪ್ರದೇಶವಾಗಿತ್ತು. ಈ ನಿಷ್ಪತ್ತಿಯಿಂದ ಈ ಸ್ಥಳದಲ್ಲಿ ಕಟ್ಟಿದ ಊರು ಬೆಂಗಾಡೂರು ಆಯಿತು. ಕೆಂಪೇಗೌಡರ ಪರಿಶ್ರಮದಿಂದ ಸುಂದರವಾದ ಬೆಂಗಳೂರು ನಿರ್ಮಾಣವಾಗಿದ್ದು ಕಾಲಾಂತರದಲ್ಲಿ ಆಧುನಿಕರ ಕೈಸಿಕ್ಕು 'ಬೆಂಗಳೂರು' ಆಯಿತು ಎಂದು ವಾದಿಸುವ ಒಂದು ವಾದವನ್ನು ಕಾಣಬಹುದು.

ಆದರೆ "ಹಳೇ ಬೆಂಗಳೂರು ಎಂಬ ಪರಿಚಿತವಾಗಿದ್ದ ಒಂದು ಚಿಕ್ಕ ಗ್ರಾಮವು ಹೆಬ್ಬಾಳ-ಕೊಡಿಗೇನಹಳ್ಳಿ ಪರಿಸರದಲ್ಲಿ ಇತ್ತೀಚಿನವರೆಗೆ ಇತ್ತು. ಅದೇ ಶಾಸನೋಕ್ತ 'ಬೆಂಗಳೂರು' ಇದು ತಾವರೆಕೆರೆವರೆಗೆ ವಿಸ್ತರಿಸಿರಬಹುದು"[೯] ಈ ರೀತಿಯ ವಾದ-ವಿವಾದಗಳನ್ನು ಜನರು ಸತ್ಯ ಎಂದು ಪರಿಗಣಿಸಿದವರೆ ಹೆಚ್ಚು. 'ಬೆಂಗಳೂರು' ಎಂಬ ಪದ ೯-೧೦ನೇ ಶತಮಾನದಲ್ಲಿಯೇ ಇತ್ತು ಎಂಬುದಕ್ಕೆ ಸಿಗುವ ನೇರವಾದ ನಿಖರವಾದ ಆಧಾರವೇ ಈ ಶಾಸನ. ಬೇಗೂರಿನಲ್ಲಿ ಸಿಕ್ಕಿರುವ "ಯುದ್ಧಚಿತ್ರಣವಿರುವ ಶಾಸನ"[೧೦] ವನ್ನು ನೋಡಿದಾಗ ಗಂಗರ ರಾಜನಾದ 'ಶ್ರೀಮದೆಜೆಯಪ್ಪರಸರ್' ಎಂಬುವವನು ಗಂಗರ ರಾಜರಲ್ಲಿ 'ಎರೆಗಂಗ' ಎಂದು ಕರೆಯಿಸಿಕೊಳ್ಳುವನಾಗಿದ್ದು ಇವನಿಗೆ ಇಮ್ಮಡಿ ನೀತಿಮಾರ್ಗ ಎಂದು

ಹೆಸರಿತ್ತು. ಇವನು ಕ್ರಿ.ಶ.೮೮೬ರಿಂದ ೯೨೦ರವರೆಗೂ ಆಳಿದ. ಇದರಿಂದ ಯಾವ ಸಂಶಯವೂ ಇಲ್ಲ. ನಾಗತ್ತರನು ತುಂಬೆಪಾಡಿ ಯುದ್ಧದಲ್ಲಿ ಸೋತದ್ದು ನಿಖರವಾದ ಸತ್ಯವಾದ ಘಟನೆಯಾಗಿದ್ದು, ಈ 'ಬೆಂಗುಳೂರು' ಪದದ ಪ್ರಯೋಗ ಶಾಸನವು ಕೂಡ ಗಂಗರ ಕಾಲದ ಶಾಸನವೇ ಎಂದು ವಿದ್ವಾಂಸರು ಸ್ಪಷ್ಟಪಡಿಸಿರುವುದರಿಂದ 'ಬೆಂಗುಳೂರು' ಎಂಬ ಪದವು ೯-೧೦ನೇ ಶತಮಾನಗಳಷ್ಟು ಹಳೆಯದು. ಇತ್ತೀಚೆಗೆ ನಡೆದ ಯಾವುದೇ ಕತೆಗೆ ಆಧಾರವಿಲ್ಲ.

ಶಾಸನದಲ್ಲಿ ಗುರುತಿಸಿರುವ 'ಬೆಂಗುಳೂರು' ಈಗಿನ ಬೆಂಗಳೂರೇ ಎಂಬುದರಲ್ಲಿ ಸಂದೇಹವಿಲ್ಲ. ಅಲ್ಲದೆ ಬಲ್ಲಾಳನ ಕತೆಯನ್ನು ಅನುಸರಿಸಿದರು ಸಹ ಅವನ ಕಾಲದ ಒಂದು ತಮಿಳು ಶಾಸನದಲ್ಲಿ 'ವೆಂಗಳೂರು' ಎಂದು ಕರೆದಿದೆ. (ಮಡಿವಾಳ ಸೋಮೇಶ್ವರ ದೇವರ ಶಾಸನ) ಅಂದರೆ ಆಗಲೂ ಕೂಡ 'ಬೆಂದಕಾಳೂರು' ಎಂದಿರಲಿಲ್ಲ. ಎಂಬುದು ನಮಗೆ ಸ್ಪಷ್ಟವಾಗಿ ತಿಳಿಯುತ್ತದೆ. ಹಾಗಿದ್ದರೆ 'ಬೆಂಗುಳೂರು' ಬೆಂಗಳೂರು ಹೇಗಾಯಿತು? ಎಂಬುದಕ್ಕೆ ಉತ್ತರ ತುಂಬ ಸ್ಪಷ್ಟವಾಗಿ ತಿಳಿಯುತ್ತೆ. ಉಚ್ಚಾರದ ಸುಲಭತೆಯ ಕಾರಣ 'ಗ'ಕಾರದ 'ಉ'ಕಾರವನ್ನು ಜನಬಿಟ್ಟಿರಬೇಕು. ಇದು 'ಬೆಂಗುಳೂರು' ಎಂಬ ಮಾತಿನ ರೂಪದ ನಿಷ್ಪತ್ತಿ ಕುರಿತು ಮಾಡಿರುವ ಚಿಂತನೆಯನ್ನು ನೋಡಿದಾಗ ಸ್ಪಷ್ಟವಾಗುತ್ತದೆ.

"ಬೆಂಗುಳ+ಊರು=ಬೆಂಗುಳೂರು

ಬೆಂಗುಳ : ೧. ಬೆಳ್+ಕುಳ = ಬೆಂಗುಳ

೨. ಬಿಳಿದು+ಕುಳ= ಬೆಂಗುಳ

೩. ಬೆಸಂ+ಕುಳ=ಬೆಂಗುಳ

'ಕುಳ' ಎಂದರೆ ಆಳು, ವ್ಯಕ್ತಿ ಎಂಬರ್ಥವಿದೆ.

೧. ಪ್ರಸಿದ್ಧನಾದ, ವರ್ಚಸ್ವಿಯಾದ ಮನುಷ್ಯನ ಊರು

೨. ಸ್ವಚ್ಛ-ಪ್ರಾಮಾಣಿಕ ಮನುಷ್ಯನ ಊರು

೩. ಆಜ್ಞಾವಿಧೇಯನಾದ ಮನುಷ್ಯನ ಊರು"[೧೧]

ಈ ರೀತಿ ಭಾಷಾಶಾಸ್ತ್ರದ ಮೂಲದಿಂದಲೂ ಸಹ ಬೆಂಗಳೂರು ಪದದ ನಿಷ್ಪತ್ತಿಗೆ ಕಾರಣ ಹುಡುಕುವ ಕಾರ್ಯವನ್ನು ಸೂಕ್ತ ಎಂದು ಹೇಳಬಹುದು. ಒಟ್ಟಾರೆ ನೋಡಿದಾಗ ಬೇಗೂರಿನಲ್ಲಿರುವ 'ಬೆಂಗುಳೂರು' ಪದದ ನಿಷ್ಪತ್ತಿಯ ಶಾಸನ ೯-೧೦ನೇ ಶತಮಾನದಾಗಿದ್ದು. ಅದು ಗಂಗರ ಕಾಲದೆಂದು ಸ್ಪಷ್ಟವಾಗಿ ತಿಳಿಯಬಹುದು. ಅಲ್ಲದೇ 'ಬೆಂಗುಳೂರು' ಪದವೇ ಮುಂದೆ ಬೆಂಗಳೂರು ಎಂದಾಯಿತು ಎಂದು ನಾವು ಅಂತಿಮವಾಗಿ ತೀರ್ಮಾನಿಸಬಹುದು. ಆದ್ದರಿಂದ ಸಾಂಸ್ಕೃತಿಕವಾಗಿ ಒಂದು ಊರಿನ ಸ್ಥಳನಾಮದ ಬಗ್ಗೆ ತಿಳಿಯಲು ಶಾಸನದ ಪ್ರಾಮುಖ್ಯತೆ ಏನು? ಎಂಬುವಲ್ಲಿ ಬೇಗೂರು ಶಾಸನವು ಮಹತ್ವಯುತ ವಾದುದ್ದಾಗಿದೆ.

## ೪.೩ ಬೇಗೂರು ಕ್ಷೇತ್ರದಲ್ಲಿ ದೊರೆತ ಇತರ ಶಾಸನಗಳ ಮಹತ್ವ:-

### ಬೇಗೂರು ನಾಗತ್ತರನ ಶಾಸನ

**ಊರು** : ಬೇಗೂರು

**ತಾಲ್ಲೂಕು:** ಬೆಂಗಳೂರು ದಕ್ಷಿಣ

**ಜಿಲ್ಲೆ** : ಬೆಂಗಳೂರು

**ರಾಜಮನೆತನ:**ಗಂಗರು

**ರಾಜ** : ನಾಗತ್ತರ

**ಕಾಲ** : ಕ್ರಿ.ಶ.ಸು.೯೦೦

**ಅಳತೆ** : ೯೧ ಸೆಂ.ಮೀ.ಉದ್ದ

೯೮ ಸೆಂ.ಮೀ.ಅಗಲ

**ಸ್ಥಳ** : ನಾಗೇಶ್ವರ ದೇವಾಲಯದ ಆವರಣದಲ್ಲಿದೆ

**ಶಾಸನ ಪಾಠ :-**

೧ ಸ್ವಸ್ತಿ ಸಮ. . . . . ಧಿಮದ

೨ . . . . ನೆರೊಳ್ಗಂಡ ಶ್ರೋಣೀತಪುರವರೇಶ್ವರ... ಶ್ವರರ

೩ . . . . ನಾತ್ಮಜಂ ಹರವೃಷಭಲಾಂಚನಂ... ತ್ರಿ . .ತ್ಥಿ ಕೋಪನಂ ಬಲಿ

೪ . . ಷಣಂ ನನ್ನಿ ಪೆರ್ಬ್ಬಾಣ[ಂ]ಸಮರಪ್ರವೀಣಂ ಕಾಮಿನೀಕಾಮಂ ಮಹಾ

೫ ಸತ್ಯರಾಧೇಯಂ ಸಾಮತ್ತಸುನ್ದರಂ ಲೀಳಾಪುರನ್ದರಂ ಘಟೇಯ [?]

೬ ಶ್ರೀಮತ್ ನಾಗತ್ತರಂ ಬೀರವರ್ಮನ ಸಾಧಿಸಿ ಬಲ್ಲವರಸ ರಟ್ಟ . . .

೭ ಬೆಂಪೂರೊಳ್ ಸೋಮನಾತನ ದೇಗುಲಮಮ್ಮಾಡಿಸಿ ದಿವ್ಯಾಸಕ್ತಿ ಭಟ

೮ ಗ್ರ್ಗೆಲ್ಲಾಕಾಲಕ್ಕಂ ತೆಱೆಯಾ ಬಿಟ್ಟು ಕಾಲಂಕಟ್ಟಿ ಧಾರೆಯನೆರೆದು ಬಿ. . .

೯ . . . ಕಱಿಟ್ಟಗೆಯಾ ಬಿಟ್ಟು ಕವಿಲೆ ನರೆಯುಮಂ ಕೊಟ್ಟು [ಪ]

೧೦ (ಟ್ಟ)ತ್ತು ಖಣ್ಡುಗ ಮಣ್ಣುಮಂ ಸರ್ವ್ವಭ್ಯನ್ತರ ಸಿದ್ದಿಯಾಗಿರೆ ಕೊಟ್ಟನ್. . .

೧೧ ಸಿಯುಮನಱದೊಂ ಪಂಚಮಹಾಪಾತಕಂ ಸ್ವದತ್ತಂ ಪರದತ್ತಂ ವಾಯೋ

೧೨ . . . . . ಯಪಾತ ಗಾಯೋ[ನ]ರಮ್ ಬ್ರಹ್ಮಸ್ವತ್ತು ವಿಷಂ ಘೊರಂನಾದಿ

೧೩ಪನ್ತಿ ದೇವಸ್ವಂ ಪುತ್ರ ಪೌತ್ರಿಕಂ ಈ ಧನ ನಮಂ[ಪೊತ್ತ]ಬಟ್ಟಗಿಕಡು

೧೪ ದೆ . . . . ದುಕ್ಕಂ ಕೇಡಂಗೆಯ್ವೋನುಂಣ್ಬಾತನ್ನೀ ದೇಗುಲಗಳಂ ಪಡಿಸಲಿ

(-ಇತಿಹಾಸ ದರ್ಶನ, ಸಂಪುಟ-೩, ಸಂಚಿಕೆ-೧. ೧೯೮೮)

**ಶಾಸನ ಸಾರಾಂಶ:-**

ನಾಗತ್ತರನು ವೃಷಭಲಾಂಚನಂ, ಸಮರಪ್ರವೀಣಂ, ಕಾಮಿನೀಕಾಮಂ, ಸತ್ಯರಾಧೇಯಂ, ಸಾಮಂತಸುಂದರಂ, ಲೀಲಾಪುರಂದರಂ, ಘಟೀಯ ಎಂಬ ವಿಶೇಷಣಗಳಿಂದ ಕರೆದಿದ್ದು. ನಾಗತ್ತರನು ಬೀರವರ್ಮನನ್ನು ಸಾಧಿಸಿ ಬೆಂಪೂರಿನಲ್ಲಿ ಸೋಮನಾಥನ ದೇವಾಲಯವನ್ನು ಮಾಡಿಸಿ ದಿವ್ಯಾಶಕ್ತಿ ಭಟ್ಟರಿಗೆ ಎಲ್ಲಾ ಕಾಲಕ್ಕೂ ದಾನಧರ್ಮಗಳನ್ನು ನೀಡುತ್ತಾ ಬಂದಿದ್ದಾನೆ ಎಂಬುದು ಶಾಸನದ ಸಾರಾಂಶವಾಗಿದೆ.

**ಶಾಸನದ ವಿಶೇಷ :-**

ಬೇಗೂರು ಕ್ಷೇತ್ರದಲ್ಲಿ ಸಿಕ್ಕಿರುವ ಹೆಚ್ಚು ಶಾಸನಗಳು ದೇವಾಲಯದ ಆವರಣದಲ್ಲಿಯೇ ದೊರೆತಿದೆ. ಆದ್ದರಿಂದ ಈ ಶಾಸನವು ಸಹ ದೇವಾಲಯದ ಆವರಣದಲ್ಲಿ ಸಿಕ್ಕಿದ್ದು. ದೇವಾಲಯಕ್ಕೆ ಸುತ್ತು ಗೋಡೆಯನ್ನು ಕಟ್ಟುವ ಸಂದರ್ಭದಲ್ಲಿ ತಳಪಾಯ ತೋಡುತ್ತಿದ್ದಾಗ ಹಳೆಯ ತಳಪಾಯದ ಅವಶೇಷಗಳಲ್ಲಿ ಸೇರಿಹೋಗಿತ್ತು. ದೇವಾಲಯದ ಅರ್ಚಕರ ಮುಂಜಾಗ್ರತೆಯಿಂದ ಈ ಶಾಸನ ರಕ್ಷಿಸಲ್ಪಟ್ಟಿದೆ. ಡಾ.ದೇವರಕೊಂಡಾರೆಡ್ಡಿಯವರು ಈ ಶಾಸನದ ಪಾಠವನ್ನು ಓದಿ ದಾಖಲಿಸಿದ್ದಾರೆ.

ಈ ಶಾಸನದಲ್ಲಿ ಕಾಲದ ಬಗ್ಗೆ ಯಾವುದೇ ಮಾಹಿತಿ ಸಿಗುವುದಿಲ್ಲ. ಬೇಗೂರಿನ ಶಾಸನಗಳಲ್ಲಿ ನಾಗತ್ತರನ ಬಗ್ಗೆ ಪ್ರಸ್ತಾಪವಿರುವ ಶಾಸನಗಳ ಸಂಖ್ಯೆ-೪, ಈ ಬೇಗೂರು ಶಾಸನಗಳ ಕಾಲವನ್ನು ಬಿ.ಎಲ್.ರೈಸ್ ರವರು ಸುಮಾರು-೮೯೦ ಎಂದು ನಿಗದಿಗೊಳಿಸಿದ್ದಾರೆ.

"ಬೆಂಗಳೂರಿನ ವಸ್ತು ಸಂಗ್ರಹಾಲಯದ ಶಾಸನದಲ್ಲಿ ನಗತ್ತರನು ಸತ್ತ ಉಲ್ಲೇಖ ಬಂದಿರುವುದರಿಂದ"[೨] ಇದು ಅವನ ಕೊನೆಯ ಶಾಸನವೆಂದು ಡಾ.ದೇವರಕೊಂಡಾರೆಡ್ಡಿಯವರು ಪರಿಗಣಿಸಿದ್ದಾರೆ. ಈಗ ದೊರೆತಿರುವ ಶಾಸನವು ನಾಗತ್ತರನು ಬೀರವರ್ಮನನ್ನು ಸಾಧಿಸಿದ ತರುವಾಯ ದೇವಾಲಯವನ್ನು ಕಟ್ಟಿಸಿದ ಉಲ್ಲೇಖ ಬರುವುದರಿಂದ ಇದರ ಕಾಲವನ್ನು "ಕ್ರಿ.ಶ.ಸು.೮೯೦ ಎಂದು ನಿಗದಿಗೊಳಿಸುವುದು ಸೂಕ್ತವೆಂದು"[೩] ಕಾಣುತ್ತದೆ.

ಈ ಶಾಸನದ ಪಾಠದಲ್ಲಿ ವೃಷಭಲಾಂಛನವನ್ನು ಹೊಂದಿರುವ ನಾಗತ್ತರ ಯುದ್ಧದಲ್ಲಿ ಪರಮವೀರಪ್ರವೀಣ ಎಂದು ಬರೆಯಲಾಗಿದೆ. ನಾಗತ್ತರನ ಹೊಗಳಿಕೆಯ ಮೂಲಕ ಪ್ರಾರಂಭವಾಗಿದೆ. ಅಲ್ಲದೆ ಅಗರದ ಒಂದು ಶಾಸನದಲ್ಲಿ 'ಕಲಿಯುಗದ ಅಣುವ' ಎಂದು ಪ್ರಯೋಗಿಸಿರುವುದನ್ನು ಕಾಣಬಹುದು. ಅಗರದ ಸತ್ಯವಾಕ್ಯ ಪೆರ್ಮಾಡಿ ಕಾಲದ ಶಾಸನದಲ್ಲಿ ಇವನ ಆಳು ಇರುಗನೆಂಬುವವನು ಕೆರೆಯನ್ನು ಕಟ್ಟಿಸಿ ಎರಡು ತೂಬುಗಳನ್ನು ಇಟ್ಟಂತೆ ಹೇಳಿರುವುದನ್ನು ಶಾಸನದಲ್ಲಿ ಕಾಣಬಹುದು. ಅಂದರೆ ಸತ್ಯವಾಕ್ಯ ಪೆರ್ಮಾಡಿಯ ಕಾಲದಿಂದಲೂ (೮೭೮-೯೦೫) ಈತ ಬೆಂಪೂರು ನಾಡನ್ನು

ನೋಡಿಕೊಳ್ಳುತ್ತಿದ್ದ ಎಂದಾಗ ಬೆಂಪೂರು ನಾಡು ೮ನೇ ಶತಮಾನದಲ್ಲಿಯೇ ಜನನಿಬಿಡ ಪ್ರದೇಶವಾಗಿತ್ತು ಎಂಬುದನ್ನು ಗಮನಿಸಬಹುದಾಗಿದೆ.

ಈ ಬೆಂಪೂರು ನಾಡಿನ ಮಾಂಡಲಿಕನಾಗಿದ್ದ ಎಱೆಯಪ್ಪನ (೮೮೬-೯೨೧) ಕಾಲದಲ್ಲಿಯೂ ಬೆಂಪೂರು ನಾಡಿನ ಅಧಿಕಾರಿಯಾಗಿದ್ದ ನಾಗತ್ತರಿಗೆ 'ತೊಣ್ಡಬ್ಬೆ' ಎಂಬ ಮಗಳೂ, 'ಬುಟ್ಟಣಸೆಟ್ಟಿ' ಎಂಬ ಮಗನೂ 'ಪೇಗೂರ' ಎಂಬ ಮನೆಮಗನೂ ಇದ್ದರೆಂದು ತಿಳಿಯುತ್ತದೆ. ಬುಟ್ಟಣಸೆಟ್ಟಿಯು ಬೆಂಗಳೂರು ಕೋಟೆ ಕಾಳಗದಲ್ಲಿ ಸತ್ತ, 'ಪೇಗೂರ' ಸಹ ಯಾವುದೋ ತುರುಗೊಳ್ ಕಾಳಗದಲ್ಲಿ ಸಾಯುತ್ತಾನೆ. ನಾಗತ್ತರ ತುಂಬೆಪಾಡಿ ಯುದ್ಧದಲ್ಲಿ ಸಾಯುತ್ತಾನೆ. ಬಹುಶಃ ಈತನ ಸಾವಿನ ನಂತರ ಇವನ ಮಗಳು ತೊಣ್ಡಬ್ಬೆ ಸನ್ಯಸನ ವಿಧಿಯಿಂದ ಮುಡಿಪಿದಂತೆ ತಿಳಿಯುತ್ತದೆ. ಈ ಶಾಸನದಲ್ಲಿ ಪ್ರಯೋಗಿಸಿರುವ ಮತ್ತೊಂದು ಪದ ಎಂದರೆ 'ನನ್ನಿಪೆರ್ಬ್ಬಾಣನೆಂದಿದೆ' ಬಾಣ ವಂಶಸ್ಥರು ಅಲ್ಲಲ್ಲಿ ಗಂಗರ ಅಧಿಕಾರಿಗಳಾಗಿದ್ದರೆಂದು ಇತರೆ ಶಾಸನಗಳಿಂದ ತಿಳಿಯುತ್ತದೆ. "ವರ್ತೂರಿನ ಮತ್ತು ಚೆಲ್ಲಂಪಟ್ಟ . . . . ಶಾಸನಗಳಲ್ಲಿ ಮಹಾಬಲಿವಂಶದ ನಿಜಪನ ಮಗ ಅಣ್ಣಿಗನ ಉಲ್ಲೇಖವಿದೆ. ಬಹುಶಃ ಈ ನಾಗತ್ತರನು ಬಾಣ ವಂಶದವನಾಗಿದ್ದು ಗಂಗ ಅಧೀನದಲ್ಲಿ ಸೇವೆ ಸಲ್ಲಿಸುತ್ತಿದ್ದಿರಬಹುದು"[೧೪] ಎಂದು ಡಾ.ದೇವರಕೊಂಡಾರೆಡ್ಡಿಯವರು ತಿಳಿಸಿದ್ದಾರೆ. ಏನೇ ಆದರೂ ಸಹ ೮ನೇ ಶತಮಾನದಲ್ಲಿಯೇ ಸಾಂಸ್ಕೃತಿಕವಾಗಿ ಮಹತ್ವದ ಸ್ಥಳವಾಗಿದ್ದ ಬೇಗೂರು, ನಾಗತ್ತರನೆಂಬ ಗಂಗರ ಮಾಂಡಲಿಕನಿಂದ ನಿರಂತರ ದಾನಗಳು, ಜನಪರ ಕಾರ್ಯಗಳು ನಡೆಯುತ್ತಿದ್ದು, ನಾಗತ್ತರನಿಂದ ಸೋಮೇಶ್ವರ ದೇವಾಲಯ ನಿರ್ಮಾಣ ಮಾಡಲಾಯಿತು ಎಂಬ ವಿಚಾರಗಳು ತಿಳಿದು ಬರುವುದರಿಂದ ಈ ಶಾಸನವು ಮಹತ್ವಯುತ ವಾದದ್ದಾಗಿದೆ.

## ಪೇಗೂರನ ವೀರಗಲ್ಲು

**ಊರು** : ಬೇಗೂರು — **ರಾಜಮನೆತನ** : ಗಂಗರು

**ತಾಲ್ಲೂಕು** : ಬೆಂಗಳೂರು ದಕ್ಷಿಣ — **ಮಾಂಡಲಿಕ ರಾಜ** : ಪೇಗೂರ

**ಜಿಲ್ಲೆ** : ಬೆಂಗಳೂರು

**ಸ್ಥಳ** : ನಾಗೇಶ್ವರ ದೇವಾಲಯದ ಹಿಂದೆ ಪ್ರಕಾರದ ಗೋಡೆಗೆ ಹಾಕಿರುವ ವೀರಗಲ್ಲು

**ಶಾಸನ ಪಾಠ :-**

೧ ಸ್ವಸ್ತಿ ಶ್ರೀನಾಗ

೨ ತ್ತರನ ಮನೆಯ

೩ ಗದಿಂ ಪೇಗೂ

೪ ರಸ್ವರ್ಗ್ಗ ಪರಲೋ

೫ ಕಕೆ ಸಂದ

(ಎಫಿಗ್ರಾಫಿಯಾ ಕರ್ನಾಟಿಕ. Ix ಪುಟ-೩೧, ಸಂಖ್ಯೆ-೩೭)

**ಶಾಸನ ಸಾರಾಂಶ :-**

ನಾಗತ್ತರನ ಮನೆಮಗನಾಗಿದ್ದ ಪೇಗೂರು ತುರುಗೊಳದಲ್ಲಿ ಸಾಯುತ್ತಾನೆ ಎಂದು ವಿದ್ವಾಂಸರು ಹೇಳಿದ್ದಾರೆ. ಆದರೆ ಶಾಸನದಲ್ಲಿ ಹೇಗೆ ಸತ್ತ ಎಂದು ಹೇಳುವುದಿಲ್ಲ. ನಾಗತ್ತರನ ಮನೆಮಗನಾದ ಪೇಗೂರ ಪರಲೋಕಕ್ಕೆ ಸಂದ ಎಂದಷ್ಟೇ ಇದೆ.

**ಶಾಸನದ ವಿಶೇಷ :-**

ಈ ಶಾಸನವನ್ನು ಇಟ್ಟಿರುವ ಸ್ಥಳವನ್ನು ಗಮನಿಸಿದಾಗ ರಾಜರ ಮುಂಜಾಗ್ರತೆ ಕ್ರಮವನ್ನು ಗಮನಿಸಬಹುದು. ಈ ಶಾಸನ ವ್ಯಾಸದಲ್ಲಿ ಚಿಕ್ಕದಾಗಿದ್ದರಿಂದ ದೇವಾಲಯದ ಹಿಂದಿನ ಗೋಡೆಗೆ ಅಂಟಿಸಲಾಗಿದೆ. ಕಾರಣ ಜನರಿಗೆ ಮಾಹಿತಿ ದೀರ್ಘ ಕಾಲದವರೆಗೆ ತಲುಪಲಿ ಎಂಬುದಾಗಿದೆ. ಇಲ್ಲಿ ಬಹುಮುಖ್ಯವಾದ ವಿಚಾರ ಶಾಸನವನ್ನು ರಕ್ಷಿಸುತ್ತಿದ್ದ ಪರಿ ಹಾಗೂ ನಾಗತ್ತರನಿಗೆ ಒಬ್ಬ ಪೇಗೂರ ಎಂಬ ಮನೆಮಗ ಇದ್ದ ಎಂಬ ಮಾಹಿತಿ.

## ತೊಣ್ಡಬ್ಬೆಯ ಶಾಸನ :–

**ಊರು** : ಬೇಗೂರು
**ರಾಜಮನೆತನ** : ಗಂಗರ

**ತಾಲ್ಲೂಕು** : ಬೆಂಗಳೂರು ದಕ್ಷಿಣ
**ಮಾಂಡಲಿಕ** : ನಾಗತ್ತರ

**ಜಿಲ್ಲೆ** : ಬೆಂಗಳೂರು

**ಸ್ಥಳ** : ಬೇಗೂರು ಗ್ರಾಮದ ದಿಣ್ಣೆಯಲ್ಲಿರುವ ಮಣ್ಣಿನ ಕೋಟೆಯ ೨ನೇ ಬಾಗಿಲ ಕಂಬದ ಮೇಲಿದೆ.

**ಶಾಸನ ಪಾಠ :–**

೧ ಭದ್ರಮಸ್ತು ಜಿ

೨ ನಸಾಸನಾಯಶ್ರೀ

೩ ಮತು ನಾಗತ್ತರನ

೪ ಮಗಳ್ತೊಣ್ಡಬ್ಬೆಸ

೫ ನ್ಯಸನಂಗ್ಯೆದು

೬ ಮುಡಿಪಿದಳ್

(ಎಪಿಗ್ರಾಫಿಯಾ ಕರ್ನಾಟಿಕ. Ix, ಬೆಂಗಳೂರು, ಸಂಖ್ಯೆ–೮೮)

**ಶಾಸನದ ಸಾರಾಂಶ :–**

ನಾಗತ್ತರನ ಮಗಳಾದ ತೊಣ್ಡಬ್ಬೆಯು ಸನ್ಯಾಸಂಗೈದು ಮುಡಿಪಿದಳ್ ಎಂದು ಶಾಸನ ಪಾಠ ತಿಳಿಸುತ್ತದೆ. ಈ ಶಾಸನವು ಸಹ ರಕ್ಷಣೆಯ ದೃಷ್ಟಿಯಿಂದ ಕೋಟೆಯನ್ನು ಆಯ್ಕೆ ಮಾಡಿಕೊಂಡು ಮಣ್ಣಿನ ಕೋಟೆಯ ಎರಡನೆ ಬಾಗಿಲಿನ ಕಂಬದ ಮೇಲೆ ಹಾಕಿರುವುದನ್ನು ಕಾಣಬಹುದಾಗಿದೆ. ಈ ಶಾಸನದ ಮೂಲಕ ನಾಗತ್ತರನಿಗೆ ತೊಣ್ಡಬ್ಬೆ ಎಂಬ ಮಗಳು ಇದ್ದಳು ಎಂಬುದು ತಿಳಿಯುತ್ತದೆ. ಆದರೆ ಈಕೆ ಜೈನಧರ್ಮಕ್ಕೆ ಪ್ರಭಾವಿತಳಾಗಿ ಸಲ್ಲೇಖನ ವ್ರತ ಕೈಗೊಂಡು ಸತ್ತಿರಬಹುದು ಎಂದು ಊಹಿಸಬಹುದು. ಕಾರಣ ಈಕೆಯ ಬಗ್ಗೆ ಬೇರೆ ಎಲ್ಲೂ ಮಾಹಿತಿ ಸಿಗುವುದಿಲ್ಲ. ಜೊತೆಗೆ ಬೇಗೂರು ಒಂದು ಪ್ರಸಿದ್ಧ ಜೈನಕ್ಷೇತ್ರವಾಗಿತ್ತು ಎಂಬುದಕ್ಕೆ ಆಧಾರಗಳು ಸಿಗುತ್ತವೆ. ಆದ್ದರಿಂದ ಈಕೆ ಸಲ್ಲೇಖನ ವ್ರತದಲ್ಲಿಯೇ ಸತ್ತಿರಬೇಕು ಎಂದು ನಿರ್ಧರಿಸಬಹುದು.

**ಬೇಗೂರು ಹೋಬಳಿ ಬೇಗೂರು ಹಾಳು ಜಿನಬಸ್ತಿಯಾದ ಶ್ರವಣಪ್ಪನ ದಿಣ್ಣೆಯಲ್ಲಿ ಬಿದ್ದಿರುವ ಕಲ್ಲು**

ಪ್ರಮಾಣ ೬ x ೨

**ಶಾಸನ ಪಾಠ :-**

೧ ಶ್ರೀಮತ್ಪರಮಗಂಭೀರಸ್ಯಾದ್ವಾದಾಮೋಘಲಾಂ

೨ ಛನಂಜೀಯಾತ್ರೈ ಲೋಕ್ಯನಾಥಸ್ಯ ಶಾಸನಂಜ

೩ ನ ಶಾಸನಂ ಸ್ವಸ್ತಿಸಕವರ್ಷ ೧೩೪೯ನೆಯ ಪರಾಭವ

೪ ಸಂವತ್ಸರದಲು ಶ್ರಿಮೂಲ ಸಂಘವದೇಶಿಯಗಣದ

೫ ಕೊಣ್ಡಕುಂದಾನ್ವಯದ ಪುಸ್ತುಕಗಛದ. . . .

೬ ಶ್ರೀಮತು ಪ್ರ. . . . ಸಿದ್ಧಾನ್ತಿ ದೇವರ ಶಿಷ್ಯರಪ್ಪ ಶ್ರೀಮ

೭ ತ್ಸುಭಚಂದ್ರಸಿದ್ಧಾನ್ತಿ ದೇವರಗುಡ್ಡ

೮ ಚಕ್ಕಿ ಮಯ್ಯನೆನಾಗಿಯ ಕರಿಯಪ್ಪದಣ್ಣನಾಯಕರಪ್ಪದ

೯ ಣ್ಡ. . . . . . . .

೧೦ . . . . . . . . .

೧೧ . . . . . . .

೧೨. . . . . . . . .

೧೩. . . . ಮೊರಸುನಾತಾಳ್ವಂದೆಕಾದಿ

೧೪ ರಿ . . . ಕಲಿಯೂರಗ್ರಹಾರ ಕೊಟ್ಟಸರ್ವೆ ಬಾಧಾಪ

೧೫ ರಿಹಾರವಾಗಿ ಚೊಕ್ಕಿಮಯ್ಯ ಜಿನಾಲಯಂ

೧೬ ಚಂದ್ರಾದಿತ್ಯರುಳ್ಳಂನಕಸಲ್ವಿಂತಾಗಿ . . . .

೧೭ ತರಿಧರ್ಮ ಮನಡಸುವಂತಾಗಿ . . . .

೧೮ ರಿಗೆ ಆವನಾನೊಬವನಳಿದೆಜಿ‍ದಂಗಂಗೆಯ

೧೯ ತಡಿಯಲು ಹನ್ನೆರಡು ಸಾಯಿರ ಕವಿಲೆಯು

೨೦ ಮಂಹನ್ನೆರಡು ಸಾಯಿರ ಬ್ರಾಹ್ಮಣರು ಮಂ

೨೧ ಕೊನ್ದರು ॥ ಶ್ರಿಮ . . . .

೨೨ . . . . . . . .

೨೩ . . . . . . . . .

೨೪. ಣ್ಡನಾಯಕ ಚೊಕ್ಕಿಮಯ್ಯ. . .

೨೫ . . . . . . . .

೨೬ . . . . . . . .

೨೭ . . . . . . . . .

೨೮ ರಡುನಿಲಿಸಿದನುಕಲು . . . ಮಾಡಿಸಿ

೨೯ ಕೊಟ್ಟ

(ಎಫಿಗ್ರಾಫಿಯಾ ಕರ್ನಾಟಿಕ, ಬೆಂಗಳೂರು. Ix ಸಂಖ್ಯೆ-೮೨)

**ನಾಗೇಶ್ವರ ದೇವಸ್ಥಾನದಿಂದ ಬೆಂಗಳೂರು ಮ್ಯೂಜಿಯಂನಲ್ಲಿ ಇಟ್ಟಿರುವ ಶಾಸನ**

**ಹಳಗನ್ನಡ ಅಕ್ಷರ – ಪ್ರಮಾಣ ೭.೬ x ೪.೬**

೧ ಸ್ವಸ್ತಿ ಶ್ರೀತೆಂಗಾಲಮದಕ ಇದು ಗಾಮುಣ್ಡನಮಯ್ಯುಂ ಬುಯ್ದು

ಕೊರಕೆಱಗೆನ

. . . . ರದಾವಿನೊಳ್ಗೆ ಲೆಕಾದಿಸತ್ತ . . . . . ತಿ . . . . .

(ಎಫಿಗ್ರಾಫಿಯಾ ಕರ್ನಾಟಿಕ, ಬೆಂಗಳೂರು. Ix ಸಂಖ್ಯೆ-೮೪)

**ನಾಗೇಶ್ವರ ದೇವಸ್ಥಾನದ ಅಶ್ವತ್ಥಮರದ ಕೆಳಗಿರುವ ವೀರಗಲ್ಲು**

೧ . . . . . ಱಂಜವಾಗಿಲು

೨ . . . . ನೊಳ ಕೊಟ್ಟು

೩ . . . . ತುಯಿ . . .

೪ . . . . ಸತ್ತಥ .

೫ . . . . ರ್ಮ್ಮ

(ಎಫಿಗ್ರಾಫಿಯಾ ಕರ್ನಾಟಿಕ, ಬೆಂಗಳೂರು. Ix ಸಂಖ್ಯೆ-೮೯)

**ಬೇಗೂರು ಗ್ರಾಮದ ವೀರಭದ್ರ ದೇವಾಲಯದ ಹೊರಗಡೆ ಬಲಭಾಗದ ಗೋಡೆ ಮೇಲೆ ಇರುವ ಶಾಸನ**

೧ ಪರಿಧಾವಿಸಂವತ್ಸರದ ಆಸ್ವೀಜಸು ೭ ಸೋಮವಾರದಲು ಶ್ರೀಮತು . . .

೨ ತೋಗೂರತಿ ಪ್ಪೊಡೆಯರ ಮಗ ಮಲ್ಲವೊಡೇರು ಕೊಟ್ಟ ಸಾದನ ಕಟದ

ಮಾನ್ಯ ತಪಿನ . . .

೩ ನು . . . . ಹೋಗುವರು ಜೆಸಶ್ರೀ॥

(ಎಫಿಗ್ರಾಫಿಯಾ ಕರ್ನಾಟಿಕ, ಬೆಂಗಳೂರು. Ix ಸಂಖ್ಯೆ-೮೨)

**ಬೆಂಗಳೂರು ಗ್ರಾಮದ ಕೋಟೆಯಲ್ಲಿ ೨ನೇ ಬಾಗಿಲ ಬಲಭಾಗದ ಜಗಲಿಗೆ ಸೇರಿದ ಕಲ್ಲಿನಲ್ಲಿನ ಶಾಸನ**

ಪ್ರಮಾಣ ೩ x ೪

(ಮೇಲ್ಭಾಗ ಹೋಗಿದೆ)

೧ . . . . ನಾಯ

೨ ಪರ್ಮ್ಮಣನ್ದಿ

೩ ಭಟ್ಟಾರಕರುರ

೪ ವಿಕಾನ್ತಿರಸಿನ್ಧಾ

೫ ನ್ತಿಯರಪ್ಪಮಂಕ

೬ ಬ್ಬೆಕನ್ತಿಯರ್

೭ . . . . .

೮ . . . ದ್ಧಾನ್ತಿನಿಲ್ಲಿಸಿದ . .

೯ ಮಂಗಳ . . . .

(ಎಫಿಗ್ರಾಫಿಯಾ ಕರ್ನಾಟಿಕ, ಬೆಂಗಳೂರು. Ix ಸಂಖ್ಯೆ-೯೩)

**ಬೇಗೂರು ಗ್ರಾಮದ ಕೋಟೆಯಲ್ಲಿ, ೨ನೇ ಬಾಗಿಲ ಬಲಭಾಗದ ಜಗಲಿಗೆ ಸೇರಿದ ಕಂಬದಲ್ಲಿನ ಶಾಸನ**

೧ . . . . .

೨ . . . .

೩ . . .. . .

೪ ಸಟ್ಟ . . ರಾಯ

೫ ಪುತ್ರ . . . .

೬. . . ನಸಿಧಾನ್ತಭ

೭. . . . . . .

೮ . . . ವರಶಿಷ್ಯರ್

೯ ಕುಮಾರಣನ್ದಿಭಟಾರ

೧೦ ಕಾಮಪುರಬಿದಕಣ್ಡ

೧೧ ದಮದಂಬಪಟ್ಟಣ

೧೨ ನ್ತಾಭಿಮುಖಗಳಿಯ

೧೩ ರ್ ಕ್ರಮದಿನ್ದ ವಿಹಾರಿಸು

೧೪ ತ್ತು

(ಎಫಿಗ್ರಾಫಿಯಾ ಕರ್ನಾಟಿಕ, ಬೆಂಗಳೂರು. Ix ಸಂಖ್ಯೆ-೯೫)

## ೪.೪ ಬೇಗೂರು ಕ್ಷೇತ್ರದ ಸ್ಮಾರಕ ಶಿಲೆಗಳು :-

ಪ್ರಾಚೀನ ಸ್ಮಾರಕ ಶಿಲೆಗಳು ಪ್ರಪಂಚಾದ್ಯಂತ ಬಹು ಪ್ರಮುಖ ಸ್ಥಾನವನ್ನು ಪಡೆದುಕೊಂಡು ಬಂದಿರುವುದು ಸಾಮಾನ್ಯದ ಸಂಗತಿ. ಆದರೆ ಭಾರತ ಇತಿಹಾಸವನ್ನು ಗಮನಿಸಿದಾಗ ಪ್ರಾಗೈತಿಹಾಸಿ ಕಾಲದಿಂದಲು ಕೆಲವು ಮುಖ್ಯವಾದ ಸ್ಮಾರಕಗಳು ಇಂದಿಗೂ ಕಂಡು ಬರುತ್ತಿರುವುದು ಮಹತ್ವದ ವಿಷಯವಾಗಿದೆ. ಅಂದಿನ ಕಾಲದಲ್ಲಿ ಒಂದು ಮುಖ್ಯ ಘಟನೆಯನ್ನು ಪುನಃ ಪುನಃ ಸ್ಮರಿಸಿಕೊಳ್ಳುವ ಸಲುವಾಗಿಯೋ ಅಥವಾ ಆ ಘಟನೆ ಚಿರಃಸ್ಥಾಯಿಯಾಗಿ ಉಳಿಯಲೆಂದೋ ಸ್ಮಾರಕಗಳನ್ನು ನಿರ್ಮಿಸುತ್ತಿದ್ದರು. ಈ ರೀತಿಯ ಘಟನೆಯ ಆಧಾರಿತವಾಗಿ ಹಲವಾರು ಸ್ಮಾರಕಗಳನ್ನು ಇಂದಿಗೂ ಸಹ ಕಾಣುತ್ತೇವೆ. ಹಾಗೆಯೇ ಕೇವಲ ಘಟನೆಯ ಆಧಾರವಾಗಿಯೇ ಅಲ್ಲದೆ ಒಬ್ಬ ವ್ಯಕ್ತಿ, ವೀರ, ರಾಜ ಮುಂತಾದವರ ಸಮಾಜಕಾರ್ಯ, ಪರಾಕ್ರಮತೆಯ ಪ್ರತೀಕವಾಗಿಯೂ ಸ್ಮಾರಕ ಶಿಲೆಗಳನ್ನು ನಿಲ್ಲಿಸುವ ಪದ್ಧತಿ ಪ್ರಾಚೀನ ಕಾಲದಿಂದಲೂ ರೂಢಿಗೆ ಬಂದಿದೆ. ಬೇಗೂರು ಸಹ ಐತಿಯಾಸಿಕ ಪ್ರಸಿದ್ಧ

ಸ್ಥಳವಾದ್ದರಿಂದ ಹಲವಾರು ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟ ಪ್ರದೇಶ. ಈ ಊರಿನಲ್ಲಿ ಪ್ರಾಚೀನ ದೇವಾಲಯ, ಮಣ್ಣಿನ ಕೋಟೆಗಳ ಜೊತೆಗೆ ಮಹತ್ವಯುತವಾದ ಸ್ಮಾರಕಶಿಲೆಗಳನ್ನು ಸಹ ಗಮನಿಸಬಹುದು. ಇಲ್ಲಿ ಆಧುನಿಕ ಸ್ಮಾರಕಗಳನ್ನು ಹೊರತುಪಡಿಸಿ ಪ್ರಾಚೀನ ಸ್ಮಾರಕಶಿಲೆಗಳನ್ನಷ್ಟೇ ಗಣನೆಗೆ ತೆಗೆದುಕೊಂಡಿದ್ದೇನೆ.

ಸ್ಮಾರಕಶಿಲೆಗಳ ಸ್ವರೂಪ, ನೆಡುತ್ತಿದ್ದ ಸ್ಥಳ ಮುಂತಾದ ವಿಚಾರವನ್ನು ಗಮನಿಸಿದಾಗ ಸ್ಮಾರಕ ಎಂದಾಕ್ಷಣ ಒಂದು ನಿರ್ದಿಷ್ಟ ಘಟನೆಯಿಂದಾಗಿ ಸತ್ತ ವ್ಯಕ್ತಿಯ ನೆನಪನ್ನುಂಟು ಮಾಡಲು ಇರುವ ಸಂಕೇತಗಳಾಗಿರುತ್ತವೆ. ಈ ಎಲ್ಲಾ ಸ್ಮಾರಕಗಳು ಬಹುಪಾಲು ಕಲ್ಲಿನಿಂದ ಮಾಡಿದವುಗಳಾಗಿವೆ. ಬೇಗೂರು ಕ್ಷೇತ್ರದಲ್ಲಿ ಸಿಗುವ ಸ್ಮಾರಕ ಶಿಲೆಗಳು ಮುಖ್ಯವಾಗಿ ವೀರಗಲ್ಲು, ವೀರಮಾಸ್ತಿಕಲ್ಲು ಪ್ರಮುಖವಾದವು.

**ವೀರಗಲ್ಲು:-**

'ವೀರ' ಎಂಬುದು ಸಂಸ್ಕೃತ ಪದವಾಗಿದ್ದು ಕನ್ನಡಕ್ಕೆ ಅದನ್ನು ತದ್ಬವ ರೂಪದಲ್ಲಿ ನೋಡಿದಾಗ 'ಬೀರ' ಎಂದಾಗುತ್ತದೆ. ಅಂದರೆ ಹೆಸರೆ ಸೂಚಿಸುವಂತೆ ಯುದ್ಧಗಳಲ್ಲಿ ಶೌರ್ಯವನ್ನು ಪ್ರದರ್ಶಿಸಿ ಸತ್ತ ವೀರರ ಸ್ಮರಣೆಗಾಗಿ ನಿಲ್ಲಿಸಿದ ಕಲ್ಲುಗಳಿಗೆ 'ವೀರಗಲ್ಲು' ಎಂದು ಕರೆಯುತ್ತಾರೆ. ಈ ಪದ್ದತಿ ಕೇವಲ ಭಾರತದಲ್ಲಿಯೇ ಅಲ್ಲದೆ ಪ್ರಪಂಚದಾದ್ಯಂತ ಈ ಪದ್ಧತಿಯನ್ನು ಅನುಸರಿಸುತ್ತ ಬಂದಿರುವುದನ್ನು ಕಾಣಬಹುದು. ಈಗಲೂ ಸಹ ಸತ್ತ ಯಾವನೇ ಒಬ್ಬ ವ್ಯಕ್ತಿಯ ನೆನಪಿಗಾಗಿ ಶಾಸನದ ರೀತಿ ಕಲ್ಲುಗಳನ್ನು ನೆಡುವುದು ಕಾಣುತ್ತೇವೆ. ಆದರೆ ಪ್ರಾಚೀನ ಕಾಲದಲ್ಲಿ ಆ ರೀತಿ ಎಲ್ಲಾ ವ್ಯಕ್ತಿಗಳ ಹೆಸರಿನಲ್ಲಿಯೂ ವೀರಗಲ್ಲನ್ನು ನೆಡುತ್ತಿರಲಿಲ್ಲ. ನಾನು ಮೊದಲೇ ಸೂಚಿಸಿದಂತೆ ಶೌರ್ಯ ಪರಾಕ್ರಮವನ್ನು ತೋರಿದಂತಹವರ ಸ್ಮರಣಾರ್ಥವಾಗಿ ಮಾತ್ರ ಈ ಕಲ್ಲುಗಳನ್ನು ನೆಡುತ್ತಿದ್ದರು. ಅಂದರೆ ಒಬ್ಬ ಸಾಮಾನ್ಯ ಮನುಷ್ಯರ, ವೀರ ಸಾಮಾನ್ಯವಾಗಿ ಸತ್ತ ಮಾತ್ರಕ್ಕೆ ವೀರಗಲ್ಲನ್ನು ನೆಡುತ್ತಿರಲಿಲ್ಲ ಎಂಬುದು ಅರ್ಥವಾಗುತ್ತದೆ. ಇಲ್ಲಿ ಎರಡು ರೀತಿಯ ಕಾರಣಗಳಿಗಾಗಿ ವೀರ ಮಡಿಯುತ್ತಿದ್ದ ಒಂದು ರಾಜನ ಪರವಾಗಿ ಸಾಮ್ರಾಜ್ಯವನ್ನು ಉಳಿಸಲೆಂದೋ ಅಥವಾ ಬೇರೆ ಪ್ರದೇಶವನ್ನು ಆಕ್ರಮಿಸಿಕೊಳ್ಳಲೆಂದೋ ಮಡಿದ ವೀರರು, ಎರಡನೆಯದಾಗಿ ಊರಿನ, ಸಮಾಜದ ಹಿತರಕ್ಷಣೆಯ ದೃಷ್ಟಿಯಿಂದ ಶತ್ರುಗಳಿಂದ ಮಡಿದ ವೀರರಿಗೆ ಸ್ಮಾರಕಗಳನ್ನು ನಿರ್ಮಿಸುತ್ತಿದ್ದರು.

ಪ್ರಾಚೀನ ಕಾಲದಲ್ಲಿ ವೀರಗಲ್ಲನ್ನು ಪ್ರಮುಖವಾದ ಕೆಲವು ಉದ್ದೇಶಗಳಿಗಾಗಿ ನೆಡುತ್ತಿದ್ದರು ಎಂಬುದು ತಿಳಿಯುತ್ತದೆ. ಮೊದಲನೆಯದಾಗಿ ಲೌಕಿಕ ದೃಷ್ಟಿಕೋನ: ವೀರನ ಪರಾಕ್ರಮವನ್ನು ಮೆಚ್ಚಿ ವೀರಗಲ್ಲನ್ನು ನೆಡುವುದು. ವೀರನ ಪರಾಕ್ರಮ ಲೋಕಕ್ಕೆ ತಿಳಿಯಲಿ ಎಂದು ಹಾಗೂ ಎಲ್ಲರೂ ಅದೇ ರೀತಿ ಶೌರ್ಯ, ಪರಾಕ್ರಮತೆಯನ್ನು ಮಾದರಿಯನ್ನಾಗಿ ರೂಢಿಸಿಕೊಳ್ಳಲಿ ಎಂಬ ಉದ್ದೇಶ ಮತ್ತೊಂದು, ವೀರಗಲ್ಲನ್ನು ನೆಡುವುದರಿಂದ ವೀರನಿಗೆ ಸ್ವರ್ಗವು ಪ್ರಾಪ್ತಿಯಾಗುತ್ತದೆ ಎಂದು ನಂಬಿ ವೀರಗಲ್ಲನ್ನು

ಪಾರಮಾರ್ಥಿಕ ಉದ್ದೇಶದಿಂದ ತಮ್ಮ ಕರ್ತವ್ಯ ಎಂದು ಭಾವಿಸಿ ವೀರಗಲ್ಲನ್ನು ನೆಡುತ್ತಿದ್ದದ್ದು ಸಾಮಾನ್ಯವಾಗಿತ್ತು.

ವೀರಗಲ್ಲನ್ನು ನೆಡುತ್ತಿದ್ದ ಸ್ಥಳದ ಆಯ್ಕೆಯ ವಿಚಾರವನ್ನು ನೋಡಿದಾಗ ಕರ್ನಾಟಕದಾದ್ಯಂತ ಹೆಚ್ಚು ವೀರಗಲ್ಲುಗಳು ದೇವಾಲಯದ ಆವರಣದಲ್ಲೇ ನೆಟ್ಟಿರುವುದು ಕಂಡುಬರುತ್ತದೆ. ಅದರಲ್ಲೂ ವಿಶೇಷವಾಗಿ ಶಿವನ ದೇವಾಲಯದ ಎದುರಿಗೆ ವೀರಗಲ್ಲನ್ನು ನೆಡುವುದು ಸಂಪ್ರದಾಯದಂತೆ ಬೆಳೆದುಬಂದಿದೆ. ಆದರೆ ಬೇರೆ ದೇವಾಲಯಗಳ ಬಳಿಯು ನೆಡುತ್ತಿದ್ದರಾದರು ಕಡಿಮೆ. ಇದಕ್ಕೆ ಹಲವಾರು ಕಾರಣಗಳಿರಬಹುದು. ವೀರಗಲ್ಲನ್ನು ದೇವಾಲಯದ ಬಳಿ ನೆಟ್ಟರೆ ವೀರ ದೇವರ ಸನ್ನಿಧಿಯಲ್ಲಿರುತ್ತಾನೆ ಎಂಬ ಭಾವನೆ ಇರಬಹುದು. ಆದರೆ ಎಲ್ಲಾ ವೀರಗಲ್ಲುಗಳು ದೇವಾಲಯದ ಬಳಿಯೇ ನೆಟ್ಟಿದ್ದು ಎಂದುಕೊಂಡರೆ ತಪ್ಪಾಗುತ್ತದೆ. ಕೆಲವು ವೀರಗಲ್ಲುಗಳನ್ನು ಬೇರೆಡೆಯಿಂದ ತಂದು ದೇವಾಲಯದ ಬಳಿ ಇಟ್ಟಿರಬಹುದು. ಅಥವಾ ಜನರಿಗೆ ವೀರಗಲ್ಲುಗಳು ದೇವರ ಚಿತ್ರವಿರಬೇಕು ಎಂದು ಭಾವಿಸಿ ತಂದು ಇಟ್ಟಿರಬಹುದು. ಕೆಲವು ವೀರಗಲ್ಲುಗಳಿಗೆ ಗುಡಿಗಳನ್ನು ನಿರ್ಮಿಸಿ ಪೂಜಿಸುವುದನ್ನು ಕರ್ನಾಟಕದ ಕೆಲವು ಕಡೆ ಕಾಣಬಹುದು. ಬೇಗೂರಿನ ಎಲ್ಲಾ ವೀರಗಲ್ಲುಗಳು ನಾಗೇಶ್ವರ ದೇವಾಲಯದ ಆವರಣದಲ್ಲಿಯೇ ಸಿಕ್ಕಿರುವುದು ಈ ವಾದಕ್ಕೆ ಸಾಕ್ಷಿಯಾಗುತ್ತದೆ. ದೇವಾಲಯಗಳ ಬಳಿಯಲ್ಲದೆ ಊರಿನ ಹೆಬ್ಬಾಗಿಲ ಮುಂದೆ ಚಾವಡಿ, ಹೊಲ, ಗದ್ದೆ, ತೋಪು, ಮೈದಾನಗಳಲ್ಲಿಯೂ ಸಹ ಕಂಡುಬರುತ್ತದೆ. ಈ ವೀರಗಲ್ಲುಗಳನ್ನು ಹಲವಾರು ವಿಧಗಳಾಗಿ ವಿಂಗಡಿಸುತ್ತಾರೆ. ಅವುಗಳೆಂದರೆ –

೧. ಕಳ್ಳರೊಡನೆ ಹೋರಾಡಿ ಮಡಿದ ವೀರರು
೨. ಹೆಣ್ಣುಯ್ಯಲಿನಲ್ಲಿ ಮಡಿದ ವೀರರು
೩. ಸೀಮಾ ಸಂಬಂಧದ ಕಾಳಗದಲ್ಲಿ ಮಡಿದ ವೀರರು
೪. ಊರಳಿವು –ಊರಹುಯ್ಯಲಿನಲ್ಲಿ ಸತ್ತ ವೀರರು
೫. ನೀರಲ್ಲಿ ಸತ್ತ ವೀರರು
೬. ಬೇಟೆಯಲ್ಲಿ ಸತ್ತ ವೀರರು
೭. ತುರುಗಾಳದಲ್ಲಿ ಸತ್ತ ವೀರರು
೮. ಯುದ್ಧದಲ್ಲಿ ಸತ್ತ ವೀರರು

ವೀರಗಲ್ಲುಗಳು ಕೇವಲ ವೀರರಿಗೆ ಮಾತ್ರ ನೆಡುತ್ತಿದ್ದಲ್ಲದೆ ಪ್ರಾಣಿಗಳು ತಮ್ಮ ಪರಾಕ್ರಮವನ್ನು ತೋರಿ ಸತ್ತಾಗಲು ನೆಟ್ಟಿರುವ ಪ್ರಸಂಗಗಳುಂಟು. ಎಲ್ಲಾ ವೀರಗಲ್ಲುಗಳು ಸಹ ಒಂದೇ ರೀತಿಯದಾಗಿರುವುದಿಲ್ಲ. ವಿಭಿನ್ನವಾದ ರಚನಾ ಕೌಶಲ್ಯತೆಯನ್ನು ಹೊಂದಿದ್ದು ಕೆಲವು ೩ ಹಂತದಲ್ಲಿ ರಚಿಸಿದ್ದರೆ, ಮತ್ತೆ ಕೆಲವು ಎರಡು ಹಂತದಲ್ಲಿ ಕೆತ್ತಲ್ಪಟ್ಟಿರುತ್ತದೆ. ಅಲ್ಲದೆ ವೀರಗಲ್ಲುಗಳು ಕೆಳಸ್ಥರದಿಂದ ಪ್ರಾರಂಭವಾಗಿ ಮೇಲ್‌ಸ್ಥರಕ್ಕೆ

ಹೋಗಿರುತ್ತವೆ. ಮೊದಲನೆಯ ಹಂತದಲ್ಲಿ ವೀರ ಯುದ್ಧದಲ್ಲಿ ಹೋರಾಡುತ್ತಿರುವ ದೃಶ್ಯವಿದ್ದರೆ ಎರಡನೆಯ ಹಂತದಲ್ಲಿ ಬಾಣಗಳಿಂದ, ಬರ್ಜಿಯಿಂದ ದೇಹಕ್ಕೆ ನಾಟಿರುವ ದೃಶ್ಯವಿರುತ್ತದೆ. ಮೂರನೆ ಹಂತದಲ್ಲಿ ಯಕ್ಷ-ಯಕ್ಷಿಣಿಯರು ವೀರನನ್ನು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿರುತ್ತದೆ.

ಬೇಗೂರು ಕ್ಷೇತ್ರದಲ್ಲಿ ಮಹತ್ವಯುತವಾದ ಕೆಲವು ವೀರಗಲ್ಲು ಹಾಗೂ ಮಾಸ್ತಿಗಲ್ಲುಗಳು ದೊರೆತಿದ್ದು ತನ್ನದೇ ಆದ ವಿಶೇಷತೆಯನ್ನು ಪಡೆದುಕೊಂಡಿದೆ. ಎಲ್ಲಾ ಸ್ಮಾರಕ ಶಿಲೆಗಳು ಕೂಡ ದೇವಾಲಯದ ಆವರಣದಲ್ಲಿ ಕಂಡುಬರುತ್ತದೆ. ಇಲ್ಲಿನ ವೀರಗಲ್ಲುಗಳು ಹೆಚ್ಚಿನವು 'ತುರುಗೋಳ್'ಗಳಾದರೆ ಕೆಲವು ಮಾಸ್ತಿಕಲ್ಲುಗಳು. 'ತುರುಗೋಳ್' ಎಂದರೆ ಹೆಸರೆ ಸೂಚಿಸುವಂತೆ ತುರು+ಗೋಳ್ ಎಂಬ ಎರಡು ಪದದಿಂದ ಕೂಡಿದೆ. 'ತುರು' ಎಂದರೆ ಹಸು ಎಂದು, 'ಗೋಳ್' ಎಂದರೆ ಹಿಂದಿರುಗಿಸಿ ತರುವುದು ಎಂಬರ್ಥವಿದೆ. ಇದಕ್ಕೆ 'ತುರುಗಾಳಗ' ಎಂತಲೂ ಕರೆಯುತ್ತಾರೆ. ಅಂದರೆ ಹಸುಗಳಿಗಾಗಿ ಯುದ್ಧ ಎಂದರ್ಥ. ಈ ರೀತಿಯ ಯುದ್ಧ ಅಥವಾ ಕಳ್ಳತನ ಅನೇಕ ಕಾರಣಗಳಿಂದ ನಡೆಯುತ್ತ ಬಂದಿದೆ. ಪ್ರಾಚೀನ ಕಾಲದಲ್ಲಿ ಹಸುಗಳನ್ನು ಆರ್ಥಿಕ ಶಕ್ತಿಯ ಮೂಲವನ್ನಾಗಿ ಕಾಣುತ್ತಿದ್ದರು. ಆದ್ದರಿಂದ ಪ್ರತಿಯೊಂದು ಊರಿನಲ್ಲಿಯೂ ಊರಿಗೆ ಸಂಬಂಧಿಸಿದಂತೆ ದೊಡ್ಡ ಪ್ರಮಾಣದ ಹಸುಗಳನ್ನು ಸಾಕಲೆಂದೇ ಗೋಪಾಲಕರು ಇರುತ್ತಿದ್ದರು. ಇವರು ಪರಮವೀರರು, ಶೌರ್‍ಯವಂತರಾಗಿದ್ದು ಹಸುಗಳನ್ನು ನೋಡಿಕೊಳ್ಳುವುದರ ಜೊತೆಗೆ ರಕ್ಷಿಸುವ ಕಾರ್ಯವನ್ನು ಸಹ ಮಾಡಬೇಕಾಗಿತ್ತು.

ಈ ಗೋಪಾಲಕರ ಮನಃಸ್ಥಿತಿಯನ್ನು ಕುರಿತು ಪಂಪ ತನ್ನ ಕೃತಿಯಲ್ಲಿ ಈ ರೀತಿ ಚಿತ್ರಿಸಿದ್ದಾನೆ.

"ತುಱು ಪರಿವಾರಗಳೆಮ್ಮ ಪೆಣನಂತುಱಿಯಂ ಪರಿಗುಂದಲೆಂದು ಚಿಃ
ತಱುಗೊಳೆ ಬಾಱಿಮೆಂದು ತುಱುಗೋಳೊಳೆ ಸಾವುದುಸ್ಸೈಪಿದೆಂದು ಪಾ
ಯ್ದಱಿಕೆಯ ಗೋವರಣ್ಮಿ ಬರೆಪಾಯಿಸಿ ಘೋಱಯಿಲರ್ ತಗುಳ್ದುತ
ತ್ತಱ ತಱಿವಿಕ್ಕಿ ದೇಗುಲಕೆ ಪೆರ್ಮರನಂ ಕಡಿವಂತೆ ಮಾಡಿದರ್"[೧೫]

ಎಂದು ಪಂಪ ವರ್ಣಿಸಿರುವುದು ಸೂಕ್ತವಾಗಿಯೇ ಇದೆ. ಆದ್ದರಿಂದ ಪ್ರಾಚೀನ ಕಾಲದಲ್ಲಿ ಮನುಷ್ಯರಿಗಿಂತ ಹಸುಗಳ ರಕ್ಷಣೆಯೇ ಬಹುದೊಡ್ಡ ಸಾಹಸವಾಗಿತ್ತು. ಆಕಸ್ಮಿಕ ಒಬ್ಬ ವೀರ "ತುರುಗೋಳ್‌ನಲ್ಲಿ ಭಾಗವಹಿಸದೆ ಮೌನವಾಗಿದ್ದ ವೀರರಿಗೆ ಸಮಾಜ ಯಾವ ರೀತಿಯಲ್ಲಿ ತನ್ನ ಪ್ರತಿಕ್ರಿಯೆಯನ್ನು ತೋರಿಸುತ್ತಿತ್ತು ಎಂಬ ಅಂಶ ತೆಲುಗಿನ ಜಾನಪದಗೀತೆಯೊಂದರಲ್ಲಿ ಸೊಗಸಾಗಿ ಚಿತ್ರಿತವಾಗಿದೆ. ತನ್ನ ರಾಜ್ಯದ ಮಂತ್ರಿ ಅದಕ್ಕೆ ಯಾವ ರೀತಿಯ ಪ್ರತಿಭಟನೆಯನ್ನು ತೋರಿಸುವುದಿಲ್ಲ. ಅವನು ಮನೆಗೆ ಬಂದಾಗ ಕೈಕಾಲುಗಳಿಗೆ ನೀರು ಕೊಡುವುದರ ಬದಲು ಅವನ ಹೆಂಡತಿ ಅರಿಶಿನ, ಕುಂಕುಮ, ಬಳೆಗಳನ್ನು ನೀಡುತ್ತಾಳೆ. ಊಟಕ್ಕೆ ಕುಳಿತಾಗ ಅವನ ತಾಯಿ ಒಡೆದ ಹಾಲನ್ನು ಬಡಿಸುತ್ತಾಳೆ. ಈ ರೀತಿಯ ವಿಚಿತ್ರ ವರ್ಣನೆಗಳು ತನ್ನ ಷಂಡತನಕ್ಕೆ ಹಾಕಿದ ಪುರಸ್ಕಾರವೆಂದು ಬಗೆದ ವೀರನು ತನ್ನ

ಗಂಡಸುತನವನ್ನು ಮೆರೆಯಲು ನೇರವಾಗಿ ಹೋಗಿ ಶತ್ರುಗಳೊಡನೆ ಹೋರಾಡಿ ಹಸುಗಳನ್ನು ಹಿಂದಿರುಗಿಸುವ ಪ್ರಯತ್ನ ಮಾಡುತ್ತಾರೆ”[೧೬] ಈ ಮಾತುಗಳನ್ನು ಗಮನಿಸಿದಾಗ ತಿಳಿಯುತ್ತದೆ. ಅಂದು ತುರುಗಾಳಗಕ್ಕೆ ಎಷ್ಟು ಪ್ರಾಶಸ್ತ್ಯವಿತ್ತು ಎಂಬುದು. ಈ ಕಾಳಗವು ಎರಡು ಉದ್ದೇಶದಿಂದ ನಡೆಯುತ್ತಿತ್ತು. ಒಂದು ರಾಜಕೀಯ ಕಾರಣದಿಂದ ಒಬ್ಬ ರಾಜ ಮತ್ತೊಂದು ರಾಜ್ಯದ ಹಸುಗಳನ್ನು ವಶಪಡಿಸಿಕೊಳ್ಳುವ ಮೂಲಕ ಯುದ್ಧಕ್ಕೆ ಆಹ್ವಾನಿಸುವುದು, ಮತ್ತೊಂದು ಕಳ್ಳತನವನ್ನೇ ವೃತ್ತಿಯಾಗಿಸಿ ಕೊಂಡವರು ಲಾಭಕ್ಕಾಗಿ ಜೀವನಕ್ಕಾಗಿ ಹಸುಗಳನ್ನು ಕಳ್ಳತನ ಮಾಡಲು 'ತುರುಗಾಳಗ' ನಡೆದಿರುವುದು ಕಂಡುಬರುತ್ತದೆ. ಬೇಗೂರಿನಲ್ಲಿ ದೊರೆತಿರುವ ವೀರಗಲ್ಲುಗಳನ್ನು ಪರಿಶೀಲಿಸಿದಾಗ

**ವೀರಗಲ್ಲು – ೧:–**

ನಾಗೇಶ್ವರ ದೇವಾಲಯಕ್ಕೆ ಹೋಗುವ ಮುಖ್ಯದ್ವಾರದ ಬಲಭಾಗಕ್ಕೆ ಈ ವೀರಗಲ್ಲನ್ನು ನೆಡಲಾಗಿದೆ. ಇದು ೭ ಅಡಿ ೧೨ಸೆಂ.ಮೀ.ಉದ್ದ, ೩ ಅಡಿ ಅಗಲವಿದೆ. ಈ ವೀರಗಲ್ಲು 'ತುರುಗೋಳ್' ಆಗಿದ್ದು ಇಬ್ಬರು ವೀರರು ಹಸುಗಳಿಗಾಗಿ ಹೋರಾಡಿ ಜಯಿಸಿ ಮುಡಿಪಿರುವ ಚಿತ್ರ ಕಂಡುಬರುತ್ತದೆ. ವೀರಗಲ್ಲಿನ ಮೇಲೆ ಯಾವುದೇ ಬರವಣಿಗೆ ಕಂಡುಬರುವುದಿಲ್ಲ. ಈ ವೀರಗಲ್ಲು ೩ ಹಂತಗಳಲ್ಲಿ ಉಬ್ಬುಶಿಲ್ಪದೊಂದಿಗೆ ಬಿಡಿಸಲ್ಪಟ್ಟಿದ್ದು ಮೊದಲನೆ ಹಂತ ಅಂದರೆ ಕೆಳ ಹಂತದಲ್ಲಿ ಹಸುಗಳ ಚಿತ್ರವನ್ನು ಬಿಡಿಸಲಾಗಿದೆ. ಹಸುಗಳು ಬಲಭಾಗಕ್ಕೆ ಮುಖಮಾಡಿ ಚಲಿಸುವಂತೆ ಕೆತ್ತಲಾಗಿದ್ದು ಕದ್ದುಕೊಂಡು ಹೋಗಿದ್ದ ಹಸುಗಳನ್ನು ಹೋರಾಡಿ ಜಯಿಸಿ ಪುನಃ ಕರೆತಂದಿರುವ ಸಂಕೇತವಾಗಿ ಚಿತ್ರಿಸಲಾಗಿದೆ. ಎರಡನೆಯ ಹಂತದಲ್ಲಿ ಅಂದರೆ ವೀರಗಲ್ಲಿನ ಮಧ್ಯಭಾಗದಲ್ಲಿ ಇಬ್ಬರು ವೀರರ ಚಿತ್ರ ದೊಡ್ಡದಾಗಿ ಚಿತ್ರಿಸಲಾಗಿದ್ದು ಇಬ್ಬರು ವೀರರು ಬಲಗೈಯಲ್ಲಿ ಕತ್ತಿ, ಎಡಗೈಯಲ್ಲಿ ಗುರಾಣಿಯನ್ನು ಹಿಡಿದಿರುವುದು ಕಂಡುಬರುತ್ತದೆ. ಆದರೆ ಇಬ್ಬರು ವೀರರ ಕೈಯಲ್ಲಿ ವಿಭಿನ್ನ ರೀತಿಯ ಕತ್ತಿಯಾಗಿದ್ದು ಸೊಂಟದಲ್ಲಿ ಕತ್ತಿಯನ್ನು ಇಟ್ಟುಕೊಳ್ಳಲು ಒರೆಯನ್ನು ಕಟ್ಟಿಕೊಂಡಿರುವುದು ಕಾಣಬಹುದು. ವೀರರಿಗೆ ಶತ್ರುಪಾಳಯದಿಂದ ಬಂದ ಬಾಣಗಳು ದೇಹಪೂರ್ತಿ ಚುಚ್ಚಿಕೊಂಡಿರುವಂತೆ ಕೆತ್ತಲಾಗಿದೆ.

ವೀರಗಲ್ಲಿನ ಮೇಲಿನ ಭಾಗವನ್ನು ನೋಡಿದಾಗ ಮೂರು ಜನ ಯಕ್ಷಿಣಿಯರು ವೀರರನ್ನು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವನ್ನು ಕಾಣುತ್ತೇವೆ. ಇದೊಂದು ಸುಂದರವಾದ ಉಬ್ಬುಶಿಲ್ಪವಾಗಿದ್ದು ವೀರಗಲ್ಲನ್ನು ಗಡಸುಕಲ್ಲಿನಲ್ಲಿ ಕೆತ್ತಲಾಗಿದೆ ಹಾಗೂ ವೀರಗಲ್ಲಿನ ಕೊನೆಯ ಮೂಲೆಗಳು ಸ್ವಲ್ಪಭಾಗ ನಾಶವಾಗಿದೆ.

**ವೀರಗಲ್ಲು – ೨:–**

ಈ ವೀರಗಲ್ಲು ನಾಗೇಶ್ವರ ದೇವಾಲಯದ ಆವರಣದಲ್ಲಿಯೇ ಇದ್ದು ೭ ಅಡಿ ಉದ್ದ ಹಾಗೂ ೩ ಅಡಿ ಅಗಲದಿಂದ ಕೂಡಿದೆ. ಇದರಲ್ಲಿ ಕೇವಲ ಎರಡು ಹಂತಗಳನ್ನು ಗಮನಿಸಬಹುದು.

ಮೊದಲನೆ ಹಂತದಲ್ಲಿ ವೀರನ ಚಿತ್ರವಿದ್ದು ಬಲಗೈಯಲ್ಲಿ ಕತ್ತಿ ಹಾಗೂ ಎಡಗೈಯಲ್ಲಿ ಗುರಾಣಿ ಇದೆ. ವೀರನಿಗೆ ಬಾಣಗಳು ನಾಟಿಕೊಂಡಿರುವ ದೃಶ್ಯವಿದೆ. ವೀರಶೌರ್ಯದಿಂದ ಹೋರಾಡಿ ಸತ್ತಿದ್ದಾನೆ ಎಂದು ಭಾಸವಾಗುತ್ತದೆ. ಮೇಲ್ ಭಾಗದಲ್ಲಿ ಇಬ್ಬರು ಯಕ್ಷಿಣಿಯರು ಬಲಗೈಯಲ್ಲಿ ಗದೆಯನ್ನು ಹಿಡಿದುಕೊಂಡು ವೀರನನ್ನು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಇದು ಸಹ 'ತುರುಗೋಳ್' ಆಗಿದ್ದು ಹಸುಗಳನ್ನು ಕಲ್ಲಿನ ಬಲಬದಿಗೆ ಮಧ್ಯಭಾಗದಲ್ಲಿ ವೀರನ ಜೊತೆಗೆ ಚಿತ್ರಿಸಿರುವುದು ವಿಶೇಷ ಕಾರಣ ಕಲ್ಲಿನ ಗಾತ್ರಕ್ಕೆ ತಕ್ಕಂತೆ ಇಡೀ ಸನ್ನಿವೇಶ ಚಿತ್ರಿಸುವುದು ಗಂಗರ ವಾಸ್ತುಶಿಲ್ಪದ ಒಂದು ವಿಶೇಷತೆ.

**ವೀರಗಲ್ಲು – ೩:-**

ನಾಗೇಶ್ವರ ದೇವಾಲಯದ ಮಹಾಗೋಪುರಗಳ ನಿರ್ಮಾಣ ಕಾರ್ಯ ನಡೆಯುತ್ತಿರುವುದರಿಂದ ಈ ವೀರಗಲ್ಲನ್ನು ಒಂದು ಮೂಲೆಗೆ ತಂದು ಇಡಲಾಗಿದೆ. ಇದು ೫ ಅಡಿ ೮ಸೆಂ.ಮೀ.ಉದ್ದ. ೨ ಅಡಿ ಅಗಲವಿದೆ. ಈ ವೀರಗಲ್ಲಿನಲ್ಲಿ ಕೇವಲ ವೀರನ ಚಿತ್ರವಿದ್ದು, ವೀರ ಬಲಗೈಯಲ್ಲಿ ಖಡ್ಗ ಹಾಗೂ ಎಡಗೈಯಲ್ಲಿ ಗುರಾಣಿ ಹಿಡಿದು ಚಲನೆಯ ಭಂಗಿಯಲ್ಲಿರುವುದು ಕಂಡು ಬರುತ್ತದೆ. ವೀರನ ತಲೆಯ ಕೂದಲನ್ನು ಎಡಭಾಗಕ್ಕೆ ಬಟ್ಟೆಯಿಂದ ಕಟ್ಟಲಾಗಿದೆ. ಕಲ್ಲಿನ ಎಡಭಾಗ ಒಡೆದು ಹೋಗಿರುವುದರಿಂದ ಗುರಾಣಿಯ ಚಿತ್ರಣ ಸಂಪೂರ್ಣವಾಗಿ ಕಾಣುವುದಿಲ್ಲ.

**ವೀರಗಲ್ಲು –೪ :-**

ವೀರಗಲ್ಲು ಕಾರಣಾಂತರಗಳಿಂದ ಒಡೆದುಹೋಗಿದ್ದು ವೀರಗಲ್ಲಿನ ಚಿತ್ರ ತುಂಬ ಸ್ಪಷ್ಟವಾಗಿ ಸುಂದರವಾಗಿ ಬಿಡಿಸಲಾಗಿದೆ. ಇಲ್ಲಿಯು ಸಹ ಕೇವಲ ವೀರನನ್ನಷ್ಟೇ ಚಿತ್ರಿಸಲಾಗಿದೆ. ಇಲ್ಲಿ ವೀರ ಬಲಗೈಯಲ್ಲಿ ಉದ್ದವಾದ ಖಡ್ಗ ಎಡಗೈಯಲ್ಲಿ ಗುರಾಣಿಯನ್ನು ಹಿಡಿದಿರುವುದು ಕಂಡಬಂದರೆ ಎದುರಿಗೆ ಎಡಭಾಗಕ್ಕೆ ಎದುರಾಳಿ ಬಾಣಪ್ರಯೋಗ ಮಾಡುತ್ತಿರುವ ದೃಶ್ಯವಿದೆ. ವೀರನ ದೇಹಕ್ಕೆ ಬಾಣಗಳು ನಾಟಿದ್ದು ಶಿಲ್ಪವು ಚಲನಶೀಲತೆಯಲ್ಲಿ ಬಿಡಿಸಿರುವುದು ಕಾಣಬಹುದು. ಮೇಲೆ ಯಕ್ಷಿಣಿಯರನ್ನು ತುಂಬ ಸಣ್ಣದಾಗಿ ಚಿತ್ರಿಸಿರುವುದನ್ನು ಕಾಣುತ್ತೇವೆ.

**ವೀರ ಮಾಸ್ತಿಗಲ್ಲು –೧ :-**

ನಾಗೇಶ್ವರ ದೇವಾಲಯದ ಆವರಣದಲ್ಲಿ ಕಂಡುಬರುವ ಬಹುಮುಖ್ಯವಾದ ಸ್ಮಾರಕ ಶಿಲೆಗಳಲ್ಲಿ ಮಾಸ್ತಿಗಲ್ಲು ಸಹ ಒಂದು. ೬ಅಡಿ ೮ಸೆಂ.ಮಿ. ಉದ್ದ, ೪ಅಡಿ ಅಗಲವಿದೆ. ಕಲ್ಲಿನಲ್ಲಿ ಎಡಗಡೆ ವೀರನ ಚಿತ್ರವನ್ನು ಬಲಗಡೆ ಹೆಂಡತಿಯ ಚಿತ್ರವನ್ನು ಬಿಡಿಸಲಾಗಿದೆ. ವೀರ ನೇರವಾಗಿ ನಿಂತ ಭಂಗಿಯಲ್ಲಿ ಖಡ್ಗವನ್ನು ಹೆಗಲಮೇಲೆ ಎರಡು ಕೈಗಳಿಂದ ಹಿಡಿದುಕೊಂಡು ನಿಂತಿರುವಂತೆ ಚಿತ್ರಿಸಿದ್ದು ತಲೆಯಲ್ಲಿನ ಜುಟ್ಟನ್ನು ನೇರವಾಗಿ ಕಿರೀಟದಂತೆ ಕಟ್ಟಲಾಗಿದೆ. ಕಿವಿಯಲ್ಲಿ ಸುಂದರವಾದ ಓಲೆ, ಕೈಕಾಲಿಗೆ ಕಡಗವಿದೆ. ವೀರ ಸಿಂಗರಿಸಿಕೊಂಡು ನಿಂತಿರುವಂತಿದೆ. ಹಾಗೂ ಇಲ್ಲಿಯ ಯಾವ ವೀರಗಲ್ಲಿನಲ್ಲಿಯೂ ಮೀಸೆಯನ್ನು

ಕಾಣುವುದಿಲ್ಲ. ಈ ಮಾಸ್ತಿಗಲ್ಲಿನಲ್ಲಿ ವೀರನಿಗೆ ಮೀಸೆಯನ್ನು ಬಿಡಿಸಲಾಗಿದೆ. ಬಲಭಾಗಕ್ಕೆ ವೀರನ ಹೆಂಡತಿ ಕೈಯಲ್ಲಿ ಹೂವನ್ನು ಹಿಡಿದು ವೀರನನ್ನು ಅನುಸರಿಸುವಂತೆ ಚಿತ್ರಿಸಲಾಗಿದೆ. ಕೈಗಳಲ್ಲಿ ಬಳೆ, ಕಾಲಿಗೆ ಕಡಗ ಹಾಗೂ ಕತ್ತಿನಲ್ಲಿ ಎರಡು ಬಗೆಯ ಸರವಿದೆ. ನೆತ್ತಿಯಲ್ಲಿ ಒಂದು ಡಾಬಿನ ಒಡವೆಯಿದೆ. ವೀರನ ಹೆಂಡತಿಯು ಸಹ ಸಿಂಗರಿಸಿಕೊಂಡಂತೆ ಚಿತ್ರಿಸಿದ್ದು ವೀರನನ್ನು ಅನುಸರಿಸುವಂತೆ ಸಂಕೇತಿಸುತ್ತದೆ.

**ವೀರ ಮಾಸ್ತಿಗಲ್ಲು –೨ :–**

ಈ ಮಾಸ್ತಿಗಲ್ಲು ವಿಭಿನ್ನವಾಗಿದ್ದು ಚಿತ್ರವನ್ನು ಪದ್ಮಾಸನದಲ್ಲಿ ಕುಳಿತಿರುವ ಭಂಗಿಯಲ್ಲಿ ಬಿಡಿಸಲಾಗಿದೆ. ಎಡಭಾಗಕ್ಕೆ ತಲೆಯ ಜುಟ್ಟನ್ನು ಕಟ್ಟಲಾಗಿದೆ. ಅದೇ ಭಾಗಕ್ಕೆ ಒಬ್ಬ ವೀರನ ಚಿತ್ರವಿದೆ. ಆದರೆ ಅದು ಹೆಚ್ಚು ಸ್ಪಷ್ಟವಿಲ್ಲ. ಕಲ್ಲು ಒಡೆದಿದೆ. ಕೈಕಾಲುಗಳಲ್ಲಿ ಕಡಗವನ್ನು ಕಾಣಬಹುದು. ಕತ್ತನ್ನು ಕತ್ತರಿಸಿದಂತೆ ಚಿತ್ರಿಸಿರುವುದು ಕಂಡುಬರುತ್ತದೆ.

ಮಾಸ್ತಿಗಲ್ಲು ಎಂದಾಗ ಯುದ್ಧದಲ್ಲಿ ವೀರ ಮರಣ ಹೊಂದಿದರೆ ಆತನ ಹೆಂಡತಿಯು ಸಹ ವೀರನ ಜೊತೆ ಚಿತೆಯನ್ನು ಏರಬೇಕು ಎಂಬ ಆಚರಣೆಯ ಸಂಕೇತ, ಮೊದಲು ಇದು ಸಂಪ್ರದಾಯದಂತೆ ಬೆಳೆದು ಬಂದಂತಿದೆ. ಸತಿಸಹಗಮನ ಹೊಂದುವುದಲ್ಲದೆ ಹಲವು ದಾರಿಗಳನ್ನು ಪರ್ಯಾಯವಾಗಿ ತೋರಿಸುತ್ತಿದ್ದರು. ಕಾರಣ ಅಂದಿನ ಕಾಲಕ್ಕೆ ಹೆಣ್ಣು ಗಂಡನ ಆಶ್ರಯವನ್ನು ಬಿಟ್ಟು ಬದುಕುವುದು ಅಸಾಧ್ಯ ಎಂಬ ನಂಬಿಕೆಯಿಂದ ಗಂಡ ಮರಣ ಹೊಂದಿದರೆ ಗಂಡನ ತಮ್ಮನಿಗೆ ಮದುವೆ ಮಾಡುವುದು. ಅಥವಾ ವೀರನ ಹೆಂಡತಿ ಕಠಿಣ ತಪಸ್ಸಿಗೆ ಶರಣಾಗಿ ಸಾಯುವುದು. ವೀರನ ಹೆಂಡತಿಗೆ ಇದ್ದ ಆಯ್ಕೆಗಳು. ಆದರೆ ಬೇಗೂರಿನಲ್ಲಿ ದೊರೆತಿರುವ ವೀರಮಾಸ್ತಿಗಲ್ಲನ್ನು ನೋಡಿದಾಗ ಒಂದು ಗಂಡನೊಂದಿಗೆ ಸಹಗಮನ ಹೊಂದಿದಂತೆ ಭಾಸವಾದರೆ ಮತ್ತೊಂದು ಕಠಿಣ ತಪಸ್ಸಿನಿಂದ ಸಾವಿಗೆ ಶರಣಾಗಿರುವುದು ಕಂಡುಬರುತ್ತದೆ. ಇಲ್ಲಿನ ಎರಡು ವೀರಮಾಸ್ತಿಗಲ್ಲುಗಳಲ್ಲಿ ಹೆಂಡತಿಯ ಜೊತೆ ವೀರನ ಚಿತ್ರಣವು ಇರುವುದು ಗಮನಾರ್ಹ.

ಬೇಗೂರಿನಲ್ಲಿರುವ ಎಲ್ಲಾ ವೀರಗಲ್ಲು ಹಾಗೂ ವೀರಮಾಸ್ತಿಗಲ್ಲಿನ ಲಕ್ಷಣಗಳನ್ನು ಸೂಕ್ಷ್ಮವಾಗಿ ನೋಡಿದಾಗ ಅವುಗಳ ಲಕ್ಷಣಗಳನ್ನು ಈ ರೀತಿ ಗುರ್ತಿಸಬಹುದು.

೧. ಎಲ್ಲವೂ ಒರಟು ಕಲ್ಲಿನಿಂದ ಉಬ್ಬುಶಿಲ್ಪದೊಂದಿಗೆ ರಚಿತವಾಗಿದ್ದು, ವೀರನನ್ನು ಪ್ರಧಾನವಾಗಿ ದೊಡ್ಡದಾಗಿ ಚಿತ್ರಿಸಿರುವುದು ಕಂಡುಬರುತ್ತದೆ.

೨. ಚಿತ್ರಗಳಲ್ಲಿ ವೀರ ಹಾಗೂ ಯಕ್ಷಿಣಿಯರು ಕೈಕಾಲುಗಳಿಗೆ ಕಡಗವನ್ನು ಹಾಕಿಕೊಂಡಿರುವುದು ಸಾಮಾನ್ಯವಾಗಿದೆ.

೩. ವೀರಗಲ್ಲು ಹಾಗೂ ವೀರಮಾಸ್ತಿಗಲ್ಲುಗಳಲ್ಲಿ ವೀರರ ತಲೆಯ ಕೂದಲನ್ನು ಸುಂದರವಾಗಿ ಬಟ್ಟೆಯಲ್ಲಿ ದುಂಡಗೆ ಕಟ್ಟಿರುವಂತೆ ಚಿತ್ರಿಸಲಾಗಿದೆ.

೪. ವೀರಗಲ್ಲುಗಳಲ್ಲಿ ಖಡ್ಗ, ಗುರಾಣಿ, ಕತ್ತಿ ಸಾಮಾನ್ಯವಾಗಿದ್ದು ಬೇರೆ ಆಯುಧಗಳು ವಿರಳವಾಗಿದೆ.

೫. ಎದುರಾಳಿಗಳು ಬಾಣಗಳು ಹಾಗೂ ಭರ್ಜಿಯನ್ನು ಬಳಸಿದಂತೆ ಚಿತ್ರಿಸಲಾಗಿದೆ.

ಒಟ್ಟಾರೆ ಸುಂದರವಾದ ಕೆತ್ತನೆಯಾಗಿದ್ದು, ಕೆಲವು ವೀರಗಲ್ಲಿನಲ್ಲಿ ಶಾಸನಪಾಠವಿದ್ದರೆ, ಹೆಚ್ಚು ವೀರಗಲ್ಲು, ಮಾಸ್ತಿಗಲ್ಲಿನಲ್ಲಿ ಪಾಠಗಳಿಲ್ಲ. ಶಿಲ್ಪಿಯ ವಿಚಾರವಾಗಿ ನೋಡಿದಾಗ ಕೆತ್ತನೆಯಲ್ಲಿ ಸ್ವಾತಂತ್ರತೆ ಮೆರೆದಿರುವ ಶಿಲ್ಪಿ ತನ್ನ ಸೃಜನಶೀಲತೆಯನ್ನು ಸಮಗ್ರವಾಗಿ ಬಳಸಿಕೊಂಡಿದ್ದಾನೆ. ಅಲ್ಲದೆ ಚಿಕ್ಕಬೇಗೂರಿನಿಂದ ದೊಡ್ಡಬೇಗೂರಿಗೆ ಸಾಗುವ ದಾರಿಯಲ್ಲಿರುವ ಗೋವಿನಕಲ್ಲಿನ ಚಿತ್ರವನ್ನು ಗಮನಿಸಿದಾಗ ಸೂರ್ಯ, ಚಂದ್ರರನ್ನು ಬಿಡಿಸಿರುವುದು ಕಾಣುತ್ತೇವೆ. ಹಾಗೆಯೇ ಬೇಗೂರು ದಿಣ್ಣೆಯಲ್ಲಿ ಬಿದ್ದಿರುವ ತೀರ್ಥಂಕರ ಶಿಲ್ಪದಲ್ಲಿಯೂ ಸೂರ್ಯ, ಚಂದ್ರ ಚಿತ್ರ ಬಿಡಿಸಿದ್ದು ಎರಡು ಒಂದೇ ರೀತಿಯದ್ದಾಗಿದೆ. ಅಂದರೆ ಶಿಲ್ಪಿ ಒಬ್ಬನೆ ಇರಬಹುದು ಎಂದು ಭಾಸವಾಗುತ್ತದೆ. ಒಟ್ಟಾರೆ ಬೇಗೂರು ವಾಸ್ತುಶಿಲ್ಪ, ಶಾಸನ, ವೀರಗಲ್ಲು, ವೀರಮಾಸ್ತಿಗಲ್ಲು ಒಳಗೊಂಡಂತೆ ಎಲ್ಲವೂ ಸುಂದರವಾದ ಕೆತ್ತನೆಯಾಗಿದ್ದು ಸಾಂಸ್ಕೃತಿಕವಾಗಿ ಮಹತ್ವಯುತವಾದದ್ದಾಗಿದೆ.

**೪.೫ ಮಣ್ಣಿನ ಕೋಟೆಯ ವೈಶಿಷ್ಟ್ಯ:-**

ಕೋಟೆ ಅಥವಾ ದುರ್ಗ ಎಂದಾಕ್ಷಣ ಎಲ್ಲರ ಮನಸ್ಸಿಗೆ ಬರುವುದು ಭದ್ರತೆಯ ಸಂಕೇತ. ರಕ್ಷಣೆಗೆ ಯೋಗ್ಯವಾದ ಸ್ಥಳ ಎಂಬ ಭಾವನೆ ಎಲ್ಲರಲ್ಲೂ ಬರುವುದು ಸಾಮಾನ್ಯ. ಹಳಗನ್ನಡದಲ್ಲಿ ಕೋಟೆಗೆ 'ಕೋಂಟೆ' ಎಂಬ ಮೂಲರೂಪವಿದೆ. ಸಂಸ್ಕೃತ ಭಾಷೆಯಲ್ಲಿ ಕೋಟೆಯನ್ನು 'ದುರ್ಗ' ಎಂದು ಹೇಳುವರು. ಈ ಕೋಟೆ ನಿರ್ಮಾಣದ ಬಹುಮುಖ್ಯ ಉದ್ದೇಶ ಸುರಕ್ಷತೆ. ಈ ಸುರಕ್ಷತೆ ಎಂಬುದು ಇಂದಿನ ಪ್ರಶ್ನೆಯಲ್ಲ. ಅತಿ ಪ್ರಾಚೀನ ಕಾಲದಿಂದಲೂ, ಆದಿಮಾನವನಿಂದಲೂ ಸಹ ಸುರಕ್ಷತೆಗೆ ಹೆಚ್ಚಿನ ಪ್ರಾಧಾನ್ಯತೆ ನೀಡುತ್ತಾ ಬಂದಿರುವುದನ್ನು ಕಾಣಬಹುದು. ಇದು ಎಷ್ಟರಮಟ್ಟಿಗೆ ಇತ್ತು ಎಂದರೆ ಕೋಟೆಗಳನ್ನು 'ಸಪ್ತಾಂಗಗಳಲ್ಲಿ'[೧೭] ಒಂದು ಎಂದು ರಾಜ ಭಾವಿಸಿದ್ದ. ಆದರೆ ದಕ್ಷಿಣ ಭಾರತವನ್ನು ಆಳಿದ ಗಂಗರು ಸುಭದ್ರವಾದ, ಬಲಿಷ್ಠವಾದ ಕೋಟೆಯನ್ನು ಕಟ್ಟಿಕೊಂಡಿದ್ದರ ಬಗ್ಗೆ ಎಲ್ಲೂ ಪ್ರಸ್ತಾಪವಿಲ್ಲ. ಆದರೆ ಪ್ರತಿಯೊಬ್ಬ ಸಾಮಂತರಾಜನು ಸಹ ತನ್ನ ಸುರಕ್ಷತೆಯ ದೃಷ್ಟಿಯಿಂದ ಒಂದು ಸುಭದ್ರವಾದ ಸ್ಥಳವನ್ನು ನಿರ್ಮಿಸಿಕೊಂಡು ಬದುಕಿದ್ದನ್ನು ನಾವು ಕರ್ನಾಟಕ ಇತಿಹಾಸದಲ್ಲಿ ಕಾಣುತ್ತೇವೆ.

ಪ್ರತಿಯೊಂದು ಪಟ್ಟಣವೂ ತನ್ನ ಮಟ್ಟಿಗೆ ಆಡಳಿತದ ಸ್ವಾತಂತ್ರ್ಯವನ್ನು ಪಡೆದಿದ್ದಿತಾದುದರಿಂದ ಹೊರಗಿನ ಶತ್ರುಗಳಿಂದ ಅಪಾಯವಾಗಬಾರದೆಂದು ಪ್ರತಿಯೊಬ್ಬ ಗ್ರಾಮಾಧಿಪತಿಯೂ, ಪಟ್ಟಣಾಧಿಪತಿಯೂ ತಮ್ಮ ಗ್ರಾಮ-ಪಟ್ಟಣಗಳನ್ನು ಕಣ್ಣಿಟ್ಟು ನೋಡಿಕೊಳ್ಳುತ್ತಿದ್ದರು. ಅದಕ್ಕಾಗಿ ಅನೇಕ ಸಂರಕ್ಷಕಸಾಧನಗಳನ್ನು ಕಲ್ಪಿಸಿ, ನಿರ್ಮಿಸಿ, ಯಾವಾಗಲೂ ಜಾಗೃತವಾದ ಸಿದ್ಧತೆಯಲ್ಲಿ ಇರುತ್ತಿದ್ದರು. ಈ

ದೃಷ್ಟಿಯಿಂದ ನಿರ್ಮಿಸಿದ ಹಲವಾರು ಭದ್ರವಾದ ಕೋಟೆಗಳನ್ನು ಕಾಣಬಹುದು. ಚಿತ್ರದುರ್ಗದ ಕೋಟೆ, ಐಹೊಳೆಯ ಕೋಟೆ, ಬೆಂಗಳೂರಿನ ಕೋಟೆ ಮುಂತಾದ ಭದ್ರವಾದ ಸುಂದರವಾದ ಕೋಟೆಗಳೇ ಸಾಕ್ಷಿ.

ಕೋಟೆಗಳ ಬಗ್ಗೆ ಮಾಹಿತಿಯನ್ನು ಕಲೆಹಾಕಲು ಹೊರಟರೆ ನಮಗೆ ಪ್ರಧಾನವಾಗಿ ಕಾಣುವುದು ಸಾಹಿತ್ಯ ಕೃತಿಗಳು. ಪ್ರಾಚೀನ ಕಾಲದಲ್ಲಿ ಮಹಾಕಾವ್ಯವನ್ನು ಬರೆಯುವವನಿಗೆ ಒಂದು ಮಾನದಂಡವಿತ್ತು. ಅದೆಂದರೆ ಯಾವುದೇ ಕೃತಿಯಲ್ಲಿ ಅಷ್ಟದಶವರ್ಣನೆಗಳನ್ನು ಕಡ್ಡಾಯವಾಗಿ ತರುವುದು. ತರದೇ ಇದ್ದ ಪಕ್ಷದಲ್ಲಿ ಆ ಕೃತಿಗೆ ಸಲ್ಲಬೇಕಾಗಿದ್ದ ಗೌರವ ಮನ್ನಣೆಗಳಿಂದ ದೂರವಾಗುತಿತ್ತು. ಆ ಕಾರಣದಿಂದಲೇ ಅನೇಕ ಮಹಾನ್ ಕವಿಗಳು ಅಷ್ಟದಶವರ್ಣನೆಯನ್ನು ತರುವಲ್ಲಿ ಕೆಲವು ಕಡೆ ಬಲವಂತವಾಗಿ ವಿಷಯಗಳನ್ನು ತುರುಕುತ್ತಿದ್ದರು. ಏನೇ ಆಗಲಿ ಅಷ್ಟದಶವರ್ಣನೆಯಲ್ಲಿ ಪುರದವರ್ಣನೆಯು ಸಹ ಒಂದು. ಈ ಪುರದವರ್ಣನೆ ಉಪಾಂಗವಾಗಿ ಕೋಟೆಯ ಅಂಗಾಂಗಳ ವರ್ಣನೆಯೂ, ಯುದ್ಧವರ್ಣನೆಗೆ ಉಪಾಂಗವಾಗಿ 'ಕೋಟೆಗಾಳಗ'ದ ವರ್ಣನೆಯೂ ಬಂದಿರುವುವು. ಆಗಲೇ ಅದು ಮಹಾಕಾವ್ಯ ಎಂಬ ಮನ್ನಣೆಗೆ ಪಾತ್ರವಾಗುತ್ತದೆ. ಆದರೆ ಎಲ್ಲಾ ಕವಿಗಳು ಈ ಅಷ್ಟದಶವರ್ಣನೆಯನ್ನು ಚಿತ್ರಿಸಲು ಸಹಜವಾಗಿಯೇ ಸೃಜಿಸಿಲ್ಲವಾದರು. ಕೆಲವು ಕವಿಗಳ ವರ್ಣನೆಯು ವಾಸ್ತವಕ್ಕೆ ಹತ್ತಿರವೆನಿಸುತ್ತದೆ. ಆದ್ದರಿಂದಲೇ ಕೋಟೆ, ಕೋಟೆಕಾಳಗಕ್ಕೆ ಬಹು ಪ್ರಾಚೀನ ಇತಿಹಾಸವಿದೆ.

ಕೋಟೆಯ ರಚನಾ ವಿನ್ಯಾಸಕ್ಕೆ ಗಮನಕೊಟ್ಟಾಗ ಕರ್ನಾಟಕದಾದ್ಯಂತ ಒಂದೇ ರೀತಿಯ ಕೋಟೆಗಳಿತ್ತು ಎಂದು ಭಾವಿಸಬೇಕಾಗಿಲ್ಲ. ನಮ್ಮ ಕನ್ನಡ ಸಾಹಿತ್ಯದ ಅನೇಕ ಕೃತಿಗಳಲ್ಲಿ ಈ ದುರ್ಗದ ಬಗ್ಗೆ ಪ್ರಸ್ತಾಪ ಬಂದಿರುವುದನ್ನು ಕಾಣಬಹುದು. ನಮ್ಮ ಸಾಹಿತ್ಯದ ಪ್ರಾಚೀನ ಕೃತಿಯಾದ 'ಪಂಚತಂತ್ರ'ದಲ್ಲಿ ದುರ್ಗಸಿಂಹ ಕೋಟೆಗಳ ವಿಧಗಳನ್ನು ಪಟ್ಟಿ ಮಾಡುತ್ತ 'ಗಿರಿದುರ್ಗ', 'ವನದುರ್ಗ', 'ಜಲದುರ್ಗ', ಸ್ಥಲದುರ್ಗ"[೧೮] ಎಂಬ ನಾಲ್ಕು ದುರ್ಗಗಳ ಹೆಸರನ್ನು ಹೇಳಿದ್ದು ಒಂದೊಂದು ದುರ್ಗವೂ ಮತ್ತೆ ಎರಡು ಪ್ರಕಾರವಾಗಿರುತ್ತದೆ ಎಂದು ಹೇಳಿ ಒಟ್ಟು ಎಂಟು ದುರ್ಗಗಳ ವಿವರಣೆಯನ್ನು ನೀಡುತ್ತಾನೆ.

೧. ಎರಡು ನದಿಗಳ ಸಂಗಮದ ಮಧ್ಯದ ದುರ್ಗ – ಅಂತರ್ದ್ವಿಪ

೨. ದೊಡ್ಡ ಕೆರೆಗಳಿಂದಲೂ ಒರಟು ಮುಳ್ಳುಗಳಿಂದ ಜಲದುರ್ಗ
ತುಂಬಿದ ಸರೋವರಗಳಿಂದ ಸುತ್ತುವರಿಯಲ್ಪಟ್ಟ ದುರ್ಗ – ಮಹಾಸ್ಥಳ

೧. ಬಹು ಎತ್ತರವಾದ ಬೆಟ್ಟದ ತುದಿಗಳು ನಾಲ್ಕು ಕಡೆಯಿದ್ದು
ಒಂದೇ ಬಾಗಿಲುಳ್ಳದ್ದು – ಗುಹ್ಯ

೨. ಎಲ್ಲಿಯೂ ಒಳ್ಳೆಯ ದಾರಿಯಿಲ್ಲದೆ ಬೆಟ್ಟಗಳ ನಡುವೆ ಗಿರಿದುರ್ಗ
ನೀರು ಬೀಳುವ ಸ್ಥಳದಲ್ಲಿ ಸಣ್ಣದಾರಿಯಿರುವುದು – ಪ್ರಸ್ತರ

೧. ಹೊರಗಡೆ ನೀರು, ಗಿಡ, ಮರ, ಹುಲ್ಲು ಬಳ್ಳಿಗಳಿಲ್ಲದೆ
ಒಳಗೆ ಮಾತ್ರ ಹುಲ್ಲು, ಕಡ್ಡಿ, ನೀರಿನಿಂದ ಸಮೃದ್ಧ
ವಾಗಿರುವುದು – ಉದಕಸ್ತಂಭ

೨. ಹೊರಗೆ ಉಪ್ಪುನೀರು, ಕುಡಿಯಲು ಬಾರದ ನೀರು ಸ್ಥಲದುರ್ಗ
ಅಥವಾ ಸ್ವಲ್ಪವೇ ನೀರು ಇರುವುದು – ವೈರಿಣಿ

೧. ಸುತ್ತ ನೀರು ತುಂಬಿದ ಜಲಾಶಯವಿದ್ದು
ಹೆದರಿಸುವಷ್ಟು (ದುರ್ದುರ) ಅತಿಶೀತಲ ಕೆಸರುಳ್ಳದು – ಕರ್ದಮೋದಕ

೨. ಅನೇಕ ಮರಗಳಿಂದ ಪರಿವೃತ್ತವಾಗಿ ಸುತ್ತಮುತ್ತ ವನದುರ್ಗ
ಹುಲ್ಲು ಯಥೇಚ್ಛವಾಗಿ ಬೆಳೆದಿರುವುದು – ಸ್ತಂಭಗಹನ

ಈ ರೀತಿಯಾಗಿ ಹಲವಾರು ರೀತಿಯ ದುರ್ಗಗಳನ್ನು ಪರಿಚಯ ಮಾಡಿಕೊಡುವ ದುರ್ಗಸಿಂಹ 'ಮಣ್ಣಿನಕೋಟೆಯ' ಬಗ್ಗೆ ಸ್ವಲ್ಪವೂ ತಿಳಿಸಿಲ್ಲ. ಆದರೆ ಕರ್ನಾಟಕದದ್ಯಾಂತ ಕೆಲವು ಮಾಂಡಲಿಕರಷ್ಟೇ ಮಣ್ಣಿನ ಕೋಟೆಯನ್ನು ನಿರ್ಮಿಸಿಕೊಂಡಿದ್ದರು ಎಂದು ಹೇಳಬಹುದು. ಕಾರಣ ಬೇಗೂರಿನಲ್ಲಿರುವ ಮಣ್ಣಿನಕೋಟೆ ಗಂಗರ ಮಾಂಡಲಿಕರದ್ದಾಗಿದ್ದು ಯಾರು ನಿರ್ಮಿಸಿದರು ಎಂಬುದರ ಬಗ್ಗೆ ಮಾಹಿತಿ ಇಲ್ಲ.

ಹಿಂದಿನ ಕಾಲದಲ್ಲಿ ರಾಜ ಎಷ್ಟೇ ಪರಾಕ್ರಮಿಯಾದರೂ ಸಹ ಬಹುದೊಡ್ಡ ಸೈನ್ಯವನ್ನು ಹೊಂದಿದ್ದರೂ ಶತ್ರುಗಳು ಯಾವ ಸಮಯದಲ್ಲಿ ದಾಳಿ ಮಾಡುತ್ತಾರೆ ಎಂಬುದು ಊಹಿಸಲು ಸಾಧ್ಯವಾಗದ ಮಾತು. ಆ ಕಾರಣದಿಂದಲೇ ರಾಜರು, ಮಾಂಡಲೀಕರು ಕೋಟೆಗಳ ನಿರ್ಮಾಣಕ್ಕೆ ಮುಂದಾಗುತಿದ್ದರು. ಈ ರೀತಿಯ ಯೋಚನೆ ಪ್ರಪಂಚದ ಎಲ್ಲಾ ರಾಜರುಗಳಲ್ಲಿಯೂ ಸಾಮಾನ್ಯ. ಚೀನಾದ ಮಹಾಗೋಡೆ ಈ ಯೋಚನೆಯ ಪ್ರತೀಕ ಎಂಬಂತೆ ನಿರ್ಮಾಣಗೊಂಡಿದೆ. ಇದು ಕೋಟೆಯ ಪ್ರಕಾರಕ್ಕೆ ಸೇರಬಹುದಾದ ಒಂದು ಸುತ್ತು ಗೋಡೆಯಾಗಿದೆ. ಪ್ರಪಂಚವೇ ಅಚ್ಚರಿ ಪಡುವ ಬೃಹದಾಕಾರದ, ಉದ್ದವಾದ ಗೋಡೆಯಾಗಿದ್ದು ಇಡೀ ದೇಶಕ್ಕೆ ರಕ್ಷಣೆಯನ್ನು ನೀಡಲು ನಿರ್ಮಿಸಿದ್ದನ್ನು ಸ್ಮರಿಸಿದರೆ ಪ್ರಾಚೀನ ಕಾಲದಲ್ಲಿ ರಕ್ಷಣೆಗೆ ಎಷ್ಟು ಆದ್ಯತೆ ನೀಡುತ್ತಿದ್ದರು ಎಂಬುದು ತಿಳಿಯುತ್ತದೆ.

ಕೋಟೆಗಳನ್ನು ನಿರ್ಮಿಸಿಕೊಂಡ ಮಾತ್ರಕ್ಕೆ ಶತ್ರುಗಳು ದಾಳಿ ಮಾಡುತ್ತಿರಲಿಲ್ಲ ಎಂದು ತಿಳಿಯುವುದು ಮೂಢತನ. ಆದರೆ ಪ್ರತಿಯೊಬ್ಬ ರಾಜ, ಮಾಂಡಲಿಕರಿಗೂ ಗೊತ್ತು ಕೋಟೆ ನಿರ್ಮಿಸಿಕೊಂಡ ಮಾತ್ರಕ್ಕೆ ಶತ್ರುಗಳಿಂದ ದಾಳಿಗಳು ನಿಲ್ಲುವುದಿಲ್ಲ ಎಂದು. ಆದರೆ ಕೋಟೆ ನಿರ್ಮಿಸಿಕೊಳ್ಳುವುದರಿಂದ ದಾಳಿ ಮಾಡುವವರ ಮೇಲೆ ಜಯಗಳಿಸಲು, ದಾಳಿಕೋರರನ್ನು ಆತಂಕಕ್ಕೆ

ಸಿಲುಕಿಸಲು ಸುಲಭವಾಗುತ್ತದೆ. ಆದರೆ ದಾಳಿ ಮಾಡುವ ರೀತಿ ಮಾತ್ರ ವಿಭಿನ್ನ. ಕೋಟೆಯನ್ನು ಹಾಗೂ ಕೋಟೆಯ ಒಳಭಾಗದಲ್ಲಿರುವ ಜನರನ್ನು ರಕ್ಷಿಸುತ್ತಿದ್ದ ಪರಿಯನ್ನು ನೋಡಿದಾಗ "ಕೋಟೆಯ ಒಳಭಾಗದಲ್ಲಿ ಕೋಟೆಯನ್ನು ರಕ್ಷಿಸಲು ಸಕಲ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದರು. ಕೋಟೆಯ ಗೋಡೆಯ ಮೇಲ್ಭಾಗದಲ್ಲಿ ಕೊತ್ತಳ, ಅಟ್ಟಣೆ ಮುಂತಾದುವನ್ನು ಪೂಜಿಸಿ ಅಲ್ಲಿ ಧ್ವಜವನ್ನು ಎತ್ತಿ ನಿಲ್ಲಿಸುತ್ತಿದ್ದರು. ಕೋಟೆಯ ಗೋಡೆಯ ಮೇಲೆ ಕೋಟೆಗಾಪಿನ ಬಂಟರು ಎಚ್ಚರದಿಂದ ಶತ್ರುಗಳ ಸುಳುಹನ್ನು ಕಾಯುತ್ತಿದ್ದರು. 'ಸಾರಮಾರಿ' ಮುಂತಾದ ಆಯುಧಗಳನ್ನು ಸಿದ್ಧಪಡಿಸಿಕೊಂಡಿರುತ್ತಿದ್ದರು. ಶತ್ರುಗಳ ಮೇಲೆ ಮೇಲಿನಿಂದ ಸುರಿಯಲು ಹಾವುಗಳು, ಕಾಸಿದ ಮರಳು, ಹಿಟ್ಟಿನಸರಿ ಮುಂತಾದವನ್ನು ಸಿದ್ಧಪಡಿಸಿಕೊಳ್ಳುತ್ತಿದ್ದರು. ಕೋಟೆಯ ಹೊರಭಾಗದಲ್ಲಿ ಲಗ್ಗೆ ಹತ್ತುವವರು ಏಣಿ, ಸಾರ್ಚುಂದೊರೆ, ವೀರಸೇತು, ನಡೆಸಾರ, ಬದ್ದರ, ಗಗ್ಗೆ, ಡೆಂಕಣಿಗುಮ್ಮ, ಪಡಿಗೋಂಟೆ ಮುಂತಾದ ಬಹುಕೋಟಾಯಂತ್ರ ಸಾಮಗ್ರಿಗಳ ಸಮೇತ ಕೋಟೆಯನ್ನು ಮುತ್ತುತ್ತಿದ್ದರು. ಮೇಲಿನಿಂದ ಸುಡುವ ಎಣ್ಣೆ, ಕಾಸಿದ ಮರಳು ಮುಂತಾದವನ್ನು ಸುರಿಯುತ್ತಿದ್ದರು. ಅದರ ಜೊತೆಗೆ ಬಾಣಗಳ ಮತ್ತು ಕಲ್ಲುಗಳ ಸುರಿಮಳೆಯಾಗುತ್ತಿತ್ತು. ಇಷ್ಟನ್ನೂ ಸೈರಿಸಿಕೊಂಡು ಮೇಲೆರಿದ ಭಟರಿಗೂ, ಮೇಲಿದ್ದ ಭಟರಿಗೂ ಶಸ್ತ್ರಾಸ್ತ್ರ, ಖಡ್ಗಾ ಖಡ್ಗಿ, ದಂಡಾದಂಡಿ ಕಚಾಕಚಿ (=ಕೇಶಾಕೇಶಿ, ಕಚ=ಕೇಶ)ಯುದ್ಧಗಳು ನಡೆಯುತ್ತಿದ್ದವು. ದುರ್ಗಗಳಿಗೆ ಮದ್ದಾನೆಗಳನ್ನು ನುಗ್ಗಿಸಿ ಬಾಗಿಲುಗಳನ್ನು ಭೇದಿಸುತ್ತಿದ್ದರು"[೧೯] ಈ ರೀತಿಯಾಗಿ ಒಂದು ಸುರಕ್ಷಿತ ಕೋಟೆಯಿಂದ ಆಗುತ್ತಿದ್ದ ಲಾಭಗಳನ್ನು ತಿಳಿಯಬಹುದು.



ಮೊದಲೆ ಹೇಳಿದಂತೆ ಕರ್ನಾಟಕ ಇತಿಹಾಸದಲ್ಲಿ ಕಲ್ಲಿನಕೋಟೆಗಳನ್ನು ಅಧಿಕವಾಗಿ ಕಾಣಬಹುದೇ ವಿನಃ ಮಣ್ಣಿನಕೋಟೆ ತುಂಬ ವಿರಳ. ಮಣ್ಣಿನಕೋಟೆ ಸುರಕ್ಷತೆಯ ದೃಷ್ಟಿಯಿಂದ ಕಲ್ಲಿನ ಕೋಟೆಯಷ್ಟು ಮಹತ್ವ ಪಡೆದುಕೊಂಡಿಲ್ಲವಾದರೂ ತನ್ನದೇ ಆದ ವಿಶೇಷತೆಯನ್ನು ಒಳಗೊಂಡಿದೆ. ಗಂಗರ ಮಾಂಡಲಿಕರಿಂದ ನಿರ್ವಹಣೆಗೆ ಒಳಗಾಗಿದ್ದ 'ಬೆಂಪೂರು-೧೨'ರ ಪ್ರದೇಶದ ಏಕೈಕ ಮಣ್ಣಿನ ಕೋಟೆ ಬೇಗೂರಿನ ದಿಣ್ಣೆಯಲ್ಲಿದೆ. ಕ್ರಿ.ಶ.ಸುಮಾರು ೮ನೇ ಶತಮಾನದಲ್ಲಿಯೇ ಬೆಂಪೂರು (ಬೇಗೂರು) ಜನನಿಬಿಡ ಪ್ರದೇಶವಾಗಿತ್ತು ಎಂಬುದು ತಿಳಿದುಬರುತ್ತದೆ. ಆದ್ದರಿಂದ ಇಲ್ಲಿನ ಅಧಿಕಾರಿಗಳು ಸುರಕ್ಷತೆಯ ದೃಷ್ಟಿಯಿಂದ ಕೋಟೆ ನಿರ್ಮಿಸಿಕೊಂಡಿರುವುದು ಸಹಜವೇ ಸರಿ. ಈ ಕೋಟೆಯು ನಾಗೇಶ್ವರ ದೇವಾಲಯದಿಂದ ಮೇಲಕ್ಕೆ ಸಾಗುವ ರಸ್ತೆಯಲ್ಲಿ ಎಲೆನಹಳ್ಳಿಗೆ ಹೋಗುವ ದಾರಿಯ ಬಲಭಾಗಕ್ಕೆ ಇದೆ. ಇಂದಿಗೂ ಸಹ ಕೋಟೆಯ ಬಹುಭಾಗ ನಶಿಸದೆ ಹಾಗೆಯೆ ಇರುವುದರಿಂದ ಅದರ ರೂಪ-ರೇಶೆ, ಸ್ವರೂಪವನ್ನು ಸುಲಭವಾಗಿ ಗುರ್ತಿಸಿ ವಿವರಿಸಬಹುದು. ಸಂಪೂರ್ಣವಾಗಿ ಮಣ್ಣಿನಿಂದಲೇ ನಿರ್ಮಿಸಲಾಗಿರುವ ಕೋಟೆಯು ಕಲ್ಲುಗಳನ್ನು ಬಳಸಿಕೊಂಡಿರುವುದು ತುಂಬ ವಿರಳ. ಕೋಟೆಯ ಪ್ರವೇಶದ್ವಾರವನ್ನು ಕಲ್ಲು ಕಂಬಗಳಿಂದ ನಿರ್ಮಿಸಿದ್ದು, ಎಡಭಾಗದ ಒಂದು ಕಂಬದಲ್ಲಿ "ತೊಣ್ಣಬ್ಬೆಯ

ಮರಣ ಶಾಸನವನ್ನು ಕೆತ್ತಲಾಗಿದೆ[೨೦] ಬಲಭಾಗದ ಜಗುಲಿಯಲ್ಲಿ ಎರಡು ಶಾಸನಗಳು ಇದ್ದು ಶಾಸನ ಪಾಠ ಸರಿಯಾಗಿ ಅರ್ಥೈಸಿಕೊಳ್ಳಲಾಗುವುದಿಲ್ಲ. ಕೋಟೆಯ ದ್ವಾರದಿಂದ ಮುಂದೆ ಹೋದಂತೆ ಬಲಭಾಗಕ್ಕೆ ಗಂಗರ ಶೈಲಿಯ ಈಶ್ವರ ದೇವಾಲಯವನ್ನು ಕಾಣಬಹುದು. ಈ ದೇವಾಲಯವು ಈಗ ಸಂಪೂರ್ಣವಾಗಿ ಜೀರ್ಣೋದ್ಧಾರಗೊಂಡಿದ್ದು ಗರ್ಭಗುಡಿಯ ಮೇಲೆ ಒಂದು ಗುಮ್ಮಟಾಕಾರದ ಗೋಪುರ ಹಾಗೂ ಎಡಬಲ ಬದಿಗೆ ಒಂದೊಂದು ಸಣ್ಣಗೋಪುರಗಳನ್ನು ನಿರ್ಮಿಸಲಾಗಿದೆ. ಈಗ ಈ ದೇವಾಲಯಕ್ಕೆ ಪ್ರತಿದಿನ ಪೂಜೆ ನಡೆಯುತ್ತಿದೆ. ಈ ದೇವಾಲಯದ ಮುಂದೆ ವಿಷ್ಣು ವಿಗ್ರಹವುಳ್ಳ ಎರಡು ಕಂಬಗಳನ್ನು ಕಾಣಬಹುದು. ಇದೆ ದೇವಾಲಯಕ್ಕೆ ಹೊಂದಿಕೊಂಡಂತೆ ಒಂದು ಸಣ್ಣ ವೇಣುಗೋಪಾಲಸ್ವಾಮಿ ದೇವಾಲಯವಿದ್ದು ಆ ದೇವಾಲಯದ ಎದುರಿಗೆ ಸುಮಾರು ೧೫ಅಡಿಗಳಷ್ಟು ಎತ್ತರದ ಗರುಡಗಂಬವಿರುವುದನ್ನು ಕಾಣುತ್ತೇವೆ.

ಈ ಕೋಟೆಯ ಒಳಗೆ ಯಾವುದೇ ನಿವೇಶನಗಳು ಕಂಡು ಬರುವುದಿಲ್ಲ. ಆದರೆ ಒಂದು ಬಾವಿಯಿದ್ದು ಈಗಲೂ ಸಹ ಸಮೃದ್ಧಿ ನೀರೊದಗಿಸುವ ಬಾವಿಯಾಗಿದೆ. ದಾಳಿಯ ಸಂದರ್ಭದಲ್ಲಿ, ಕೋಟೆಯ ಒಳಗಿರುವ ಜನರಿಗೆ ಸಮೃದ್ಧವಾಗಿ ನೀರನ್ನು ಒದಗಿಸುತ್ತಿದ್ದ ಬಾವಿ ಎಂಬುದು ಅರ್ಥವಾಗುತ್ತದೆ. ಚಿತ್ರದುರ್ಗ ಕೋಟೆಯಂತೆ ಎಲ್ಲಾ ಸೌಲಭ್ಯಗಳು ಇಲ್ಲದಿದ್ದರೂ ಸಹ ಮೂಲಭೂತವಾಗಿ ಸೈನಿಕರಿಗೆ ಹಾಗೂ ಕೋಟೆಯಲ್ಲಿ ಜನರನ್ನು ರಕ್ಷಿಸುವ ಎಲ್ಲಾ ವ್ಯವಸ್ಥೆಗಳನ್ನು ಮಾಡಿಕೊಂಡಿದ್ದರು ಎಂದು ತಿಳಿಯುತ್ತದೆ. ಈ ಕೋಟೆಯ ಮತ್ತೊಂದು ವಿಶೇಷವೆಂದರೆ 'ಗಜಗೊಂಡದ್ದು' ಗಜಗೊಂಡ ಎಂದರೆ ಆನೆ ಗಾತ್ರದ ಒಂದು ಹಳ್ಳ ಎಂದು ಅರ್ಥೈಸಿಕೊಂಡರು ಸಹ ಆ ಹಳ್ಳ ಯಾವ ಕಾರಣಕ್ಕಾಗಿ ನಿರ್ಮಿಸಿಕೊಂಡಿದ್ದರು ಎಂಬುದಕ್ಕೆ ಆಧಾರ ಸಿಗುವುದಿಲ್ಲ. ಆದರೆ ಅಲ್ಲಿನ ಜನಪದೀಯರ ಪ್ರಕಾರ 'ಬೆಂಪೂರು-೧೨' ಪ್ರದೇಶದಲ್ಲಿ ನಾಗೇಶ್ವರ ದೇವಾಲಯಕ್ಕೆ ಸಂಬಂಧಿಸಿದ ಒಂದು ಕಂಚಿನ ರಥ ಇದ್ದು ಅದು ಪ್ರತಿವರ್ಷ ಬ್ರಹ್ಮರಥೋತ್ಸವ ದಿನದಂದು ಮೆರವಣಿಗೆ ಮಾಡಲಾಗುತಿತ್ತು. ಆದರೆ ದಾಳಿಕೋರರ ಬಲೆಗೆ ಸಿಕ್ಕಿ ಆನೆಗೊಂಡದಲ್ಲಿ ರಥವನ್ನು ತಳ್ಳಲಾಗಿದೆ. ಈಗಲೂ ಸಹ ಒಂದು ಕಲ್ಲನ್ನು ಎಸೆದರೆ ಶಬ್ದ ಕೇಳುತ್ತದೆ ಎಂದು ಅಲ್ಲಿನ ನಿವಾಸಿಗಳು ಹೇಳುತ್ತಾರೆ. ಈ ಒಂದು ವಾದ ಒಂದು ರೀತಿ ನಿಜವಿದ್ದರೂ ಇರಬಹುದು. ಆದರೆ ಪರೀಕ್ಷೆಗೆ ಒಳಪಡಿಸಿ ಫಲಿತಾಂಶ ನಿರೀಕ್ಷಿಸುವಷ್ಟು ಸ್ಥಿತಿಯಲ್ಲಿ ಈಗ ಆನೆಗೊಂಡ ಇಲ್ಲ. ಸಂಪೂರ್ಣ ಕಲ್ಲುಮಣ್ಣಿನಿಂದ ಮುಚ್ಚಲ್ಪಟ್ಟಿದೆ. ೮ನೇ ಶತಮಾನದಲ್ಲಿಯೇ ಜನನಿಬಿಡ ಪ್ರದೇಶವಾಗಿದ್ದ ಬೇಗೂರು ಸಾಂಸ್ಕೃತಿಕವಾಗಿ ಏಕೆ ಮಹತ್ವ ಪಡೆಯುತ್ತದೆ ಎಂಬುದಕ್ಕೆ ಮಣ್ಣಿನಕೋಟೆಯು ಒಂದು ಉದಾಹರಣೆ ಎನ್ನಬಹುದು. ಕೋಟೆ ಬಹುಪಾಲು ಹಾಗೆಯೇ ಇದ್ದು ಮಣ್ಣುಕೊರೆಯದಂತೆ ಅಲ್ಲಲ್ಲಿ ಕಲ್ಲಿನಿಂದ ನಿರ್ಮಿಸಿರುವುದು ಬಿಟ್ಟರೆ ಸಂಪೂರ್ಣವಾಗಿ ಮಣ್ಣಿನಿಂದಲೇ ನಿರ್ಮಿಸಿರುವುದು ಇದರ ವಿಶೇಷತೆ.

ಬೇಗೂರಿನ ಮಣ್ಣಿನ ಕೋಟೆಯು ಅಂದಿನ ಕಾಲಕ್ಕೆ ಸುಭದ್ರವಾಗಿದ್ದು, ಜನರಿಗೆ ರಕ್ಷಣೆಯನ್ನು ನೀಡುವಲ್ಲಿ ಪ್ರಮುಖ ಪಾತ್ರವಹಿಸಿದೆ. ಕೋಟೆಯ ಸುತ್ತಲು ಆಳವಾದ ಕಂದಕಗಳಿದ್ದು ಶತ್ರುಗಳು ಅಷ್ಟು ಸುಲಭವಾಗಿ ಕೋಟೆಯನ್ನು ಪ್ರವೇಶಿಸಲು ಸಾಧ್ಯವಾಗುತ್ತಿರಲಿಲ್ಲ. ಕೋಟೆಯ ಸುತ್ತಲು ನೀರು ನಿಂತುಕೊಳ್ಳಲು ಆಳವಾದ ಜಾಗವಿದ್ದು ನೀರಲ್ಲಿ ಇಳಿದು ತರುವಾಯ ಮಣ್ಣಿನ ಕೋಟೆಯನ್ನು ಪ್ರವೇಶ ಮಾಡುವುದು ಸುಲಭದ ಮಾತಲ್ಲ. ಕೋಟೆ ತುಂಬ ಸಣ್ಣದಾದರೂ ಸಹ ರಕ್ಷಣೆಯ ದೃಷ್ಟಿಯಿಂದ ಅಷ್ಟೆ ಭದ್ರವಾಗಿದೆ. ಕೋಟೆಯ ಮೇಲೆ ಕಾವಲು ಗೋಪುರಗಳಿದ್ದು ಈಗಲೂ ಸಹ ಅದರ ಅವಶೇಷ ಕಾಣುತ್ತೇವೆ. ಒಟ್ಟಾರೆ ವೀಕ್ಷಣೆಯು ಸುಂದರವಾಗಿದ್ದು ಕೋಟೆ ಗೋಳಾಕೃತಿಯಲ್ಲಿದೆ. ಈ ಕೋಟೆಯ ಬಗ್ಗೆ ಯಾವುದೇ ಮಾಹಿತಿ ಶಾಸನದಲ್ಲಾಗಲಿ, ಇತರೆ ಕೃತಿಗಳಲ್ಲಿಯಾಗಲಿ ಸಿಗುವುದಿಲ್ಲ. ಕರ್ನಾಟಕ ಇತಿಹಾಸದಲ್ಲಿ ಈ ರೀತಿಯ ಭದ್ರವಾದ ಮಣ್ಣಿನ ಕೋಟೆ ಇತ್ತು ಎಂಬುದೇ ಒಂದು ಹೆಮ್ಮೆಯ ವಿಷಯ. ಬೇಗೂರು ಪ್ರದೇಶ ಫಲವತ್ತಾದ ಭೂಮಿಯಾಗಿದ್ದು ಸಮೃದ್ಧ ನೀರಾವರಿ ಪ್ರದೇಶವು ಕೂಡ. ಆದರೆ ಇಂದು ಆ ಪ್ರದೇಶದಲ್ಲಿ ಎಷ್ಟೇ ಆಳಕ್ಕೆ ಕೊಳವೆ ಬಾವಿ ತೋಡಿದರು ನೀರು ಸಿಗುವುದು ಕಷ್ಟಕರ. ಆದರೆ ಅಂದಿನ ಕಾಲಕ್ಕೆ ನಿರ್ಮಿಸಿದ್ದ ಕೋಟೆಯ ಬಾವಿಯು ಇಂದಿಗೂ ಸಹ ಜನರ ಬಳಕೆಗೆ ಯೋಗ್ಯವಾದ ಬಾವಿಯಾಗಿರುವುದು ಒಂದು ಆಶ್ಚರ್ಯದ ಸಂಗತಿಯೇ ಸರಿ. ಇಂದು ಆ ಕೋಟೆಯು ಸಂಪೂರ್ಣ ಪಾಳುಬಿದಿದ್ದು ರಕ್ಷಣೆಯ ಕೊರತೆ ಎದ್ದು ಕಾಣುತ್ತದೆ. ಕೆಲವರು ನಿಧಿಯ ಆಸೆಯಿಂದ ಕೋಟೆಯ ಮೂಲೆಗಳಲ್ಲಿ ಮಣ್ಣನ್ನು ತೋಡಿ ಶೋಧಿಸಿರುವುದನ್ನು ಕಾಣಬಹುದು. ಅಲ್ಲಿನ ಜನರಲ್ಲಿ ಕೋಟೆಯ ಸಾಂಸ್ಕೃತಿಕ ಮಹತ್ವ ಹಾಗೂ ಅದನ್ನು ರಕ್ಷಿಸುವ ಬಗ್ಗೆ ಸೂಕ್ತಸಲಹೆಯನ್ನು ನೀಡುವುದು ಅತ್ಯವಶ್ಯಕವಾಗಿದೆ. ಕೋಟೆಯ ಒಳಗೆ ಪ್ರವೇಶ ಮಾಡುವ ದ್ವಾರದ ಬಳಿ ಬಲಭಾಗಕ್ಕೆ ಇತ್ತೀಚಿನವರೆಗೂ ಗುಪ್ತ ಸುರಂಗ ಮಾರ್ಗವಿತ್ತು. ಆದರೆ ಆ ಪ್ರದೇಶವನ್ನು ಅತಿಕ್ರಮಿಸಿಕೊಂಡು ಶನಿಮಹಾತ್ಮ ದೇವಾಲಯವನ್ನು ನಿರ್ಮಿಸಲಾಗಿದೆ.

ಗಂಗರ ಕಾಲದಲ್ಲಿ ಕೋಟೆಗಳು ಅಷ್ಟಾಗಿ ಕಂಡುಬರುವುದಿಲ್ಲವಾದರೂ ಸಹ ಅವರ ಮಾಂಡಲಿಕ ಅಧಿಕಾರಿಯಾಗಿದ್ದ ನಾಗತ್ತರನು ಸುಭದ್ರವಾದ ಕೋಟೆಯನ್ನು ಹೊಂದಿರುವುದು ಮಹತ್ವದ ವಿಚಾರವಾಗಿದೆ.

# ಅಡಿ ಟಿಪ್ಪಣಿ

೧. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ : ಡಾ.ಎಂ.ಚಿದಾನಂದಮೂರ್ತಿ, ಪುಟ-೧೩

೨. ಶಾಸನ ಸಂಗ್ರಹ : (ಸಂ)ಎ.ಎಂ.ಅಣ್ಣಿಗೇರಿ, ಡಾ.ಆರ್.ಶೇಷಶಾಸ್ತ್ರೀ, ಪುಟ-೮

೩. ಕನ್ನಡ ಶಾಸನ ಶಿಲ್ಪ : ಡಾ.ಡಿ.ವಿ.ಪರಮಶಿವಮೂರ್ತಿ, ಪುಟ-೩೩

೪. ಕರ್ನಾಟಕದ ವೀರಗಲ್ಲುಗಳು : ಡಾ.ಆರ್.ಶೇಷಶಾಸ್ತ್ರಿ, ಪುಟ-೧೦೬, ೧೦೭

೫. ಪ್ರಬುದ್ಧ ಕರ್ನಾಟಕ : ಸಂಪುಟ ೫೧/೩, ಡಾ.ಕೆ.ವಿ.ರಮೇಶ್, ಪುಟ-೨೭

೬. ಕರ್ನಾಟಕದ ವೀರಗಲ್ಲುಗಳು : ಡಾ.ಆರ್.ಶೇಷಶಾಸ್ತ್ರೀ, ಪುಟ-೨೫೪

೭. ಅದೇ ಪುಟ-೨೫೪

೮. ಬೆಂಗಳೂರು ದರ್ಶನ : (ಸಂ)ಡಾ.ಎಲ್.ಎಸ್.ಶೇಷಗಿರಿರಾವ್, ಪುಟ-೧

೯. ಅದೇ ಪುಟ

೧೦. ಎಫಿಗ್ರಾಫಿಯಾ ಕರ್ನಾಟಿಕ : ಬೆಂಗಳೂರು ix

೧೧. ಕರ್ನಾಟಕ ಲೋಚನ : ಸಂಪುಟ-೨೦, ಪುಟ-೬೭

೧೨. ಎಫಿಗ್ರಾಫಿಯಾ ಕರ್ನಾಟಿಕ .ಬೆಂಗಳೂರು ix

೧೩. ಇತಿಹಾಸ ದರ್ಶನ ಸಂಪುಟ೩/೧. ೧೯೮೮

೧೪. ಇತಿಹಾಸ ದರ್ಶನ ಸಂಪುಟ ೩/೧. ೧೯೮೮

೧೫. ವಿಕ್ರಮಾರ್ಜುನ ವಿಜಯ : ಪಂಪ, ೮ನೇ ಆಶ್ವಾಸ, ಪುಟ-೯೫

೧೬. ಕರ್ನಾಟಕದ ವೀರಗಲ್ಲುಗಳು : ಡಾ.ಆರ್.ಶೇಷಶಾಸ್ತ್ರೀ, ಪುಟ-೧೪೧

೧೭. ರಾಜ, ಅಮಾತ್ಯ, ರಾಜ್ಯ, ದುರ್ಗ, ಕೋಶ, ಸೈನ್ಯ, ಮಿತ್ರ – ಇವೇ ಸಪ್ತಾಂಗಗಳು

೧೮. ಪಂಚತಂತ್ರ : ದುರ್ಗಸಿಂಹ, ಪುಟ-೨೧೫, ೨೧೬

೧೯. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ : ಡಾ.ಎಂ.ಚಿದಾನಂದಮೂರ್ತಿ, ಪುಟ-೩೨೧

೨೦. ಎಫಿಗ್ರಾಫಿಯಾ ಕರ್ನಾಟಿಕ .ಬೆಂಗಳೂರು ix

# ಅಧ್ಯಾಯ – ೫

## ಸಾಂಸ್ಕೃತಿಕವಾಗಿ ಬೇಗೂರಿನ ಮಹತ್ವ

ಮಾನವ ಭಾಷಾ ಕೌಶಲ್ಯದಿಂದ ನಿರಂತರವಾಗಿ ಸಮಾಜದೊಂದಿಗೆ ಸಂವಹನ ಮಾಡುತ್ತಾ ಬಂದಿದ್ದಾನೆ. ಇದರಿಂದ ಎಲ್ಲಾ ಜೀವಿಗಳಿಗಿಂತ ಭಿನ್ನ, ಬುದ್ಧಿವಂತ ಎಂಬ ಪಟ್ಟವನ್ನು ತಂದುಕೊಟ್ಟಿದೆ. ಆದರೆ ನಿರಂತರವಾಗಿ ಬೆಳೆಯುತ್ತಿರುವ ಆಧುನಿಕತೆಯ ಬಿರುಗಾಳಿಗೆ ಸಿಕ್ಕಿ ಸಾವಿರಾರು ಪದಗಳು ಹೊಸಹುಟ್ಟನ್ನು ಪಡೆದು ಭಾಷಾಸಮೂಹದಲ್ಲಿ ಸೇರಿಕೊಳ್ಳುತ್ತಿದೆ. ಆದರೆ ಮಾನವನೇ ನಿರ್ಮಿಸಿಕೊಂಡ ಭಾಷೆಗೆ, ಕೆಲವು ಪದಗಳಿಗೆ ಸರಿಯಾದ ಅರ್ಥಸಂಕಲ್ಪ ನೀಡಲಾಗದೆ ಹೆಣಗಾಡುತ್ತಿದ್ದಾನೆ. ಅಂತಹ ಪದಗಳಲ್ಲಿ 'ಸಂಸ್ಕೃತಿ', 'ಸಾಂಸ್ಕೃತಿಕ' ಎಂಬ ಪದವು ಒಂದು.

ಕನ್ನಡಕ್ಕೆ 'ಸಂಸ್ಕೃತಿ' ಎಂಬ ಪದ ಇಂಗ್ಲೀಷ್‌ನ 'ಕಲ್ಚರ್' ಎಂಬ ಪದದಿಂದ ಬಂದಿದೆ. ಈ 'ಕಲ್ಚರ್' ಎಂಬುದು ಲ್ಯಾಟಿನ್ ಭಾಷೆಯ 'ಕಲ್ಟ್' ಅಥವಾ 'ಕಲ್ಟಸ್' ಎಂಬ ಶಬ್ದಗಳಿಂದ ಬಂದಿದೆ ಎಂಬ ವಿಚಾರ ತಿಳಿಯುತ್ತದೆ. ಆದರೆ ಈ ಪದಗಳು ಪ್ರಯೋಗವಾದ ಕಾಲಕ್ಕೆ ಭೂಮಿ, ದೈವದ ಆರಾಧನೆ, ಬೆಳೆಯುವುದು ಎಂಬ ಅರ್ಥದಲ್ಲಿ ಬಳಸಲಾಗುತ್ತಿತ್ತು. ಇನ್ನು ಕನ್ನಡದ ಪ್ರಾಚೀನ ನಿಘಂಟುಗಳನ್ನು ನೋಡಿದಾಗ ಕನ್ನಡ ಸಾಹಿತ್ಯ ಪರಿಷತ್ತು ನಿಘಂಟು 'ಒಂದು ದೇಶದ ಅಥವಾ ಜನಾಂಗದ ಮಾನಸಿಕ ಸಾಧನೆ' ಎಂಬ ಅರ್ಥವನ್ನು ನೀಡಿದರೆ, 'ಕಿಟಲ್'ತನ್ನ ನಿಘಂಟುವಿನಲ್ಲಿ 'ಸಂಸ್ಕಾರ' ಎಂದಷ್ಟೇ ಹೇಳಿದ್ದಾನೆ. ಆದರೆ ಈ ಪದ ನಿರಂತರ ಬೆಳೆಯುತ್ತ ಬಂದು ನಾನಾರ್ಥಗಳಲ್ಲಿ ಬಳಕೆಗೆ ಬರಲಾರಂಭಿಸಿದೆ.

ಭಾಷೆ ಎಂಬುದು ಯಾವಾಗ ಮಡಿವಂತಿಕೆಯಿಂದ ಹೊರಬಂದು ನಿಂತಾಗಲೇ ಮಾನವನಿಗೆ ಕೆಲವು ನಿರ್ದಿಷ್ಟ ಪದಗಳಿಗೆ ಅರ್ಥವನ್ನು ಕಲ್ಪಿಸಿತ್ತಿದ್ದೆಲ್ಲ ಉಲ್ಟಾಪಲ್ಟಾವಾಗಿ ಗೋಚರಿಸಿತು. ಸಂಸ್ಕೃತಿ ಎಂದರೇನು? ಎಂಬ ಪ್ರಶ್ನೆಗೆ ಅತಿಶ್ರೇಷ್ಠ, ಉನ್ನತವಾದ, ಮೌಲ್ಯಯುತವದ ಸಂಪ್ರದಾಯ ನಡವಳಿಕೆಯ ಜೀವನವನ್ನು ಸಂಸ್ಕೃತಿ ಎಂದು ಕರೆಯುತ್ತಾರೆ ಎಂದು ಹೇಳುವ ಪಂಗಡವೊಂದಿತ್ತು. ಅದನ್ನು ಒಪ್ಪಿಕೊಂಡು ಸಹ ಜನರು ಸಾಗುತ್ತಿದ್ದರು. ಆದರೆ ಯಾವುದು ಶ್ರೇಷ್ಠ – ಕನಿಷ್ಠ, ನೀಚ–ಉತ್ಕೃಷ್ಟ ಎಂಬ ಚರ್ಚೆಗೆ ಸಿಲುಕಿದ ಬುದ್ಧಿಜೀವಿಗಳಿಗೆ ಈ ಸಿದ್ಧ ಮಾದರಿಯನ್ನು ಒಡೆದು ಹೊರಬರಲು ಮುಂದಾದರು. ಸಂಸ್ಕೃತಿ ಎಂಬುದು ಎಲ್ಲೆಂದರಲ್ಲಿ ಬಳಸಲಾರಂಭಿಸಿದರು. ದಲಿತಸಂಸ್ಕೃತಿ, ಮಹಿಳಾಸಂಸ್ಕೃತಿ, ಕಾಲೇಜು ಸಂಸ್ಕೃತಿ, ಅಷ್ಟೇ ಏಕೆ ಪಬ್ ಸಂಸ್ಕೃತಿ ಎಂಬ ಪದ ಪ್ರಯೋಗವಾದಾಗ ಮೂಲದಲ್ಲಿನ ಆದರ್ಶವಾದಿಗಳಿಗೆ ಸಂಸ್ಕೃತಿ ಎಂಬುದು ದೊಡ್ಡ ತಲೆನೋವಾಯಿತು. ಬುಡಕಟ್ಟು ಜನಾಂಗವು ಒಂದು ಸಂಸ್ಕೃತಿಯನ್ನು ಅನುಸರಿಸುತ್ತಾರೆ ಎಂದಾಗ ಮಾನವನ ಹಿಡಿತದಿಂದ ಮೀರಿ ಸಂಸ್ಕೃತಿ ಬೆಳೆಯಲಾರಂಭಿಸಿತು. ಪ್ರಧಾನ, ಅಧೀನ, ಉಪಸಂಸ್ಕೃತಿ ಹೀಗೆ ಬಹುಶಿಸ್ತಿಯವಾಗಿ ರೂಪಗೊಳ್ಳಲಾರಂಭಿಸಿತು. ಮಹಾಭಾರತ ಒಂದು ಸಾಂಸ್ಕೃತಿಕ ಅಧ್ಯಯನ" ಎಂಬುದರ ಜೊತೆ ಜೊತೆಗೆ 'ಬೈಗುಳಗಳು ಒಂದು ಸಾಂಸ್ಕೃತಿ ಅಧ್ಯಯನ'ವು

ಸಾಗಲಾರಂಭಿಸಿತು. ವಿದ್ವಾಂಸರಿಗೆ ಬುದ್ಧಿಜೀವಿಗಳಿಗೆ, ಈ ಸಂಸ್ಕೃತಿ ಎಂಬ ಪದಕ್ಕೆ ನಿರ್ದಿಷ್ಟ ಅರ್ಥ ಕಲ್ಪಿಸುವಲ್ಲಿ ಸಾಧ್ಯವಾಗಲೇ ಇಲ್ಲ. ಒಂದು ಸಣ್ಣ ವಿಷಯದಿಂದ ದೊಡ್ಡ ವಿಷಯದವರೆಗೆ ಈ ಸಂಸ್ಕೃತಿ ಪದಪ್ರಯೋಗ ನಿರಂತರವಾಗಿ ಸಾಗಿದೆ. ಕೇವಲ ನಗರೀಕರಣ, ಬ್ರಾಹ್ಮಣೀಕರಣ ಎಂಬ ಪಾವಿತ್ರತೆಯ ಅರ್ಥದಿಂದ ಸಂಸ್ಕೃತಿ ನಿಲ್ಲದೆ ಸ್ಲಂಸಂಸ್ಕೃತಿ, ಪಬ್ ಸಂಸ್ಕೃತಿ, ಗುಂಡಾಸಂಸ್ಕೃತಿ,ಯವರೆಗೆ ಬಂದು ನಿಂತಿದೆ. ಕೆಲವು ವಿದ್ವಾಂಸರಂತು ಪ್ರಪಂಚದ ಕೆಲವೇ ಕೆಲವು ಪದಗಳಿಗೆ ನಿರ್ದಿಷ್ಟ ಅರ್ಥ ಕಲ್ಪಿಸಲಾಗುತ್ತಿಲ್ಲ ಎಂಬ ಪದಗಳ ಸಾಲಿಗೆ ಸಂಸ್ಕೃತಿ, ಸಾಂಸ್ಕೃತಿಕತೆ ಎಂಬುದು ಬಂದುನಿಂತಿದೆ ಎಂದು ಹೇಳಿ ಕೈ ತೊಳೆದುಕೊಳ್ಳುತ್ತಾರೆ.

ಯಾವುದೇ ಒಂದು ಜೀವಂತ ಭಾಷೆಯು ನಿರಂತರ ಅರ್ಥವಿಕಾಸತೆಯನ್ನು ಪಡೆಯುತ್ತ ಬೆಳೆಯುತ್ತಾ ಹೋಗುತ್ತದೆ. ಎಲ್ಲಾ ಕಾಲಕ್ಕೂ ಎಲ್ಲಾ ಸಂದರ್ಭಕ್ಕೂ ಈ ಸ್ವೀಕರತೆ ಇದ್ದೆ ಇರುತ್ತದೆ. ಈ ಪ್ರಕ್ರಿಯೆಗಳು ನಡೆಯದಿದ್ದರೆ ಅದೊಂದು ಮೃತಭಾಷೆಯಾಗುತ್ತದೆ. ಆದ್ದರಿಂದ ಈ ಸಂಸ್ಕೃತಿ ಎಂಬುದನ್ನು ಪ್ರತಿಯೊಂದು ಜೀವಂತ ಭಾಷೆಯು ಕಾಲಕ್ಕೆ ತಕ್ಕಂತೆ ಅರಗಿಸಿಕೊಳ್ಳಲೇಬೇಕು. ಬ್ರಿಟಿಷರ ಆಗಮನದೊಂದಿಗೆ ಈ ಸಂಸ್ಕೃತಿ ಎಂಬುದು ಹೆಚ್ಚು ಬಳಕೆಗೆ ಬಂತು ಎಂದು ಕೆಲವರು ಹೇಳುತ್ತಾರೆ. ಒಂದೊಂದು ಕಾಲಘಟ್ಟದಲ್ಲಿ ಒಂದೊಂದು ರೀತಿಯ ವಾದಗಳು ಈ ಸಂಸ್ಕೃತಿಯ ಬಗ್ಗೆ ಬಂದಿರುವುದನ್ನು ಕಾಣಬಹುದು. ಮಾನವಶಾಸ್ತ್ರೀಯ ಅಧ್ಯಯನಗಳಿಂದ ಬಂದ ವಾದವೆಂದರೆ 'ಸಮುದಾಯ ಒಂದರ ಸಮಗ್ರ ಜೀವನ ವಿಧಾನಗಳ ಮೊತ್ತ' ಎಂದರು. ಮಾರ್ಕ್ಸ್‌ವಾದಿಗಳಂತು ಸಂಸ್ಕೃತಿಯನ್ನು ಆರ್ಥಿಕ ನೆಲೆಯಲ್ಲಿ ಚಿಂತಿಸಲು ಪ್ರಾರಂಭ ಮಾಡಿದರು.

ಹೀಗೆ ಸಂಸ್ಕೃತಿ ಎಂಬುದು ನಿರ್ದಿಷ್ಟ ಕೇಂದ್ರಬಿಂದುವಿನ ಸುತ್ತ ಕಬಂಧ ಬಾಹುಗಳನ್ನು ಚಾಚಿ ನಿಂತಿದೆ. ಕೆಲವು ಕಡೆ ಈ ಸಂಸ್ಕೃತಿ, ಸಾಂಸ್ಕೃತಿಕತೆ ಎಂಬುದು ಅಸ್ಪಷ್ಟವಾಗಿಯೇ ಬಳಕೆಯಾಗಿರುವುದನ್ನು ಕಾಣಬಹುದು. ಆದರೆ ಯಾವುದೇ ಒಂದು ನಿರ್ದಿಷ್ಟ ವಿಷಯಕ್ಕೆ ಈ ಸಂಸ್ಕೃತಿಯನ್ನು ಸೇರಿಸುವಾಗ ಯಾವುದೇ ದ್ವಂದ್ವತೆಗೆ ಎಡೆಮಾಡಿಕೊಡದಂತೆ ನಿರ್ದಿಷ್ಟವಾದ ಅರ್ಥವಂತಿಕೆಯನ್ನು ನೀಡಬೇಕಾದದ್ದು ಸಹಜ ಧರ್ಮ ಸಿಂಪಿ ಲಿಂಗಣ್ಣನವರು ಹೇಳುವಂತೆ "ಸಂಸ್ಕೃತಿ ಎಂಬ ಶಬ್ದವನ್ನು ನಾವು ಸುಲಭವಾಗಿ ಉಪಯೋಗಿಸುತ್ತಿರುವಂತೆ ಅದರ ಅರ್ಥವನ್ನು ಅಷ್ಟು ಸುಲಭವಾಗಿ ವಿವರಿಸಲಾರೆ. ಬ್ರಿಟಿಷರ ಸಂಪರ್ಕವುಂಟಾದ ಬಳಿಕ ಈ ಶಬ್ದದ ಉಪಯೋಗ ಹೆಚ್ಚಾಗಿದೆಯೆಂದು ಹೇಳುತ್ತಾರೆ. ಆ ಶಬ್ದವು ಬಹುವಿಶಾಲವಾದ ಅರ್ಥದಲ್ಲಿ ಬಳಸಲ್ಪಡುತ್ತಿರುವುದರಿಂದ ಅದರ ಅರ್ಥವನ್ನು ವಿವರಿಸುವುದು ಬಿಗಿಯಾಗಿದೆ"ಎಂದಿದ್ದಾರೆ. ನಿಜವಾಗಿಯೂ ಸಂಸ್ಕೃತಿ, ಸಾಂಸ್ಕೃತಿಕತೆ ಎಂದರೇನು? ಎಂಬ ಪ್ರಶ್ನೆಗೆ ಉತ್ತರಿಸುವುದು ಕಷ್ಟವೇ. ಆದರೆ ಒಬ್ಬ ಬರಹಗಾರ ತಾನು ಸಂಸ್ಕೃತಿ ಎಂಬ ಪದವನ್ನು ಯಾವ ನಿರ್ದಿಷ್ಟ ಅರ್ಥದಲ್ಲಿ ಬಳಸಿದ್ದೇನೆ ಎಂಬ ಸ್ಪಷ್ಟತೆಯನ್ನು ನೀಡಬಹುದು. ಆದ್ದರಿಂದ ಯಾವ ಸಂದರ್ಭದಲ್ಲಿ

ಬ್ರಾಹ್ಮಣ ದೇಶಿವಾದವನ್ನು ಬಳಸಲಾಗಿದೆ. ಯಾವ ಸಂದರ್ಭದಲ್ಲಿ ಹಿಂದುಳಿದ ಜಾತಿಗಳ ಸಂಸ್ಕೃತಿಯನ್ನು ಬಿಂಬಿಸಿದೆ ಎಂಬುದು ಸ್ಪಷ್ಟವಾಗಿರಬೇಕಷ್ಟೇ.

ಸಾಂಸ್ಕೃತಿಕ ಅಧ್ಯಯನದ ಜೊತೆ-ಜೊತೆಯಲ್ಲಿಯೇ ಈ ಸಂಸ್ಕೃತಿ ಅಧ್ಯಯನ ನಡೆಯುತ್ತಿರುತ್ತದೆ. ಇವೆರಡನ್ನು ಬೇರ್ಪಡಿಸಿ ನೋಡಲಾಗುವುದಿಲ್ಲ. ಆದ್ದರಿಂದ ನನ್ನ ಅಧ್ಯಯನದಲ್ಲಿ ಸಾಂಸ್ಕೃತಿಕ ಎಂಬುದಾಗಿ ಪದ ಪ್ರಯೋಗವಿದ್ದರೂ ಅದು ಸಂಸ್ಕೃತಿಯ ಕೇಂದ್ರದ ಸುತ್ತಲೂ ಸುತ್ತುತ್ತಿರುತ್ತದೆ ಎಂದು ಹೇಳಬಹುದು. ಬೇಗೂರು ಎಂದಾಕ್ಷಣ ನಾನು ಮೊದಲೇ ಹೇಳಿದಂತೆ ಶಾಸನಗಳ ಮೂಲಕ ಸಾಂಸ್ಕೃತಿಕ ಅಧ್ಯಯನ ಮಾಡುತ್ತಿದ್ದೇನೆ ಎಂದು ಆದರೆ ಸಂಪೂರ್ಣ ಅಧ್ಯಯನವನ್ನು ಶಾಸನಗಳಿಂದಷ್ಟೆ ವಿವರಿಸಲಾಗಿಲ್ಲ. ಜಾನಪದದ ನೆಲೆಯಲ್ಲಿಯೂ ಚಿಂತಿಸಿರುವುದು ಮುಖ್ಯವಾಗಿ ಕಾಣಬಹುದು. ಆದ್ದರಿಂದ ಸಾಂಸ್ಕೃತಿಕ ಮಹತ್ವ ಎಂದಾಗ ಸಾಮಾಜಿಕ, ರಾಜಕೀಯ, ಧಾರ್ಮಿಕ ಎಲ್ಲವನ್ನು ಒಳಗೊಂಡ ಅದರ ವಿವಿಧ ಮೂಲಗಳನ್ನು ಶಾಸನಗಳು, ಜಾನಪದೀಯ ಆಚರಣೆಗಳು, ಮುಂತಾದ ಹಲವು ಮೂಲಗಳಿಂದ ನೋಡಲಾಗಿದೆ.

ಜಾತಿವ್ಯವಸ್ಥೆ ಎಂದಾಗ ಯಾವುದೇ ಒಂದು ಜಾತಿ ಶ್ರೇಷ್ಠ ಅಥವಾ ಕನಿಷ್ಠ ಎಂಬ ಭಾವನೆಯಿಂದ ಅಧ್ಯಯನ ಮಾಡಿರುವುದಲ್ಲ. ಹಿಂದುಳಿದ ಜಾತಿಗಳು ಸಹ ಸಾಂಸ್ಕೃತಿಕವಾಗಿ ತಮ್ಮದೇ ಆದ ಮಹತ್ವದ ಆಚರಣೆಗಳು, ರೀತಿ-ನೀತಿಗಳನ್ನು ಹೊಂದಿರುತ್ತಾರೆ ಎಂಬುದನ್ನು ಚಿತ್ರಿಸುವ ಪ್ರಯತ್ನ ಮಾಡಲಾಗಿದೆ. ಆದ್ದರಿಂದ ಯಾವುದೇ ಜಾತಿಯನ್ನು ಕಡೆಗಣಿಸುವುದಾಗಲಿ ಉನ್ನತೀಕರಿಸುವ ಕಾರ್ಯ ತಪ್ಪಾದ ಗ್ರಹಿಕೆಯಾಗುತ್ತದೆ. ಬೇಗೂರು ಒಂದು ಸಾಂಸ್ಕೃತಿಕ ಅಧ್ಯಯನ ಎಂಬುದು ಬಹುಶಿಸ್ತೀಯ ನೆಲೆಯಲ್ಲಿ ಸೈದ್ಧಾಂತಿಕತೆಯನ್ನು ರೂಡಿಸಿಕೊಂಡ ಅಧ್ಯಯನವಾಗಿದೆ.

## ೫.೧ ಜಾತಿ ಮತ್ತು ಧರ್ಮವ್ಯವಸ್ಥೆ:-

**ಜಾತಿವ್ಯವಸ್ಥೆ: -**

'ಜಾತಿ' ಎಂಬುದಕ್ಕೆ ಇಂದು ಹಲವಾರು ಅರ್ಥಗಳಲ್ಲಿ ಸಂಭೋಧಿಸುವುದನ್ನು ಕಾಣುತ್ತೇವೆ. ನಿರ್ದಿಷ್ಟವಾಗಿ ಒಂದು ಕುಲ-ವಂಶದಲ್ಲಿ ಹುಟ್ಟಿದ, ತಮ್ಮದೇ ಆದ ರೀತಿ-ನೀತಿ ಸಂಪ್ರದಾಯಗಳನ್ನು ರೂಢಿಸಿಕೊಂಡ ವರ್ಗ ಅಥವಾ ಗುಂಪಿಗೆ ಒಂದು 'ಜಾತಿ' ಎಂದು ನಾವು ತಿಳಿಯುವುದು ಸೂಕ್ತ. ಬೇಗೂರು ಕ್ಷೇತ್ರದಲ್ಲಿ ಇರುವಂತಹ ಜಾತಿವ್ಯವಸ್ಥೆಯನ್ನು ನೋಡಿದಾಗ ಪ್ರಾಚೀನ ಕಾಲದಿಂದಲೂ ಯಾವ ಜಾತಿ ಇಲ್ಲಿ ಪ್ರಾಬಲ್ಯತೆಯನ್ನು ಮೆರೆಯಿತು ಎಂಬುದು ತಿಳಿದು ಬರುವುದಿಲ್ಲ. ತಿಳಿಯಲು ಯಾವುದೇ ಆಧಾರಗಳು ಸಹ ಇಲ್ಲ. ಆದ್ದರಿಂದ ಇಂದಿನ ಸ್ಥಿತಿಯಲ್ಲಿ ನಿಂತು ಯೋಚಿಸುವುದು ಸೂಕ್ತವೆನಿಸುತ್ತದೆ. ಬಹುಸಂಖ್ಯಾತರಾಗಿರುವ ಜನರನ್ನು ಆಧರಿಸಿ ಪಟ್ಟಿ ಮಾಡಿದಾಗ

* ಬ್ರಾಹ್ಮಣರು
* ಒಕ್ಕಲಿಗರು
* ಹಿಂದುಳಿದ ವರ್ಗದವರು
* ತಿಗಳ ಜನಾಂಗ
* ಲಿಂಗಾಯತರು
* ಸಾದರು

ಮುಂತಾದ ವರ್ಗಗಳನ್ನು ಪ್ರಮುಖ ಜಾತಿಗಳಾಗಿ, ಗುಂಪುಗಳಾಗಿ ವಿಂಗಡಿಸಬಹುದು. ಬ್ರಾಹ್ಮಣರು ಅತಿ ಕಡಿಮೆ ಸಂಖ್ಯೆಯಲ್ಲಿ ಇದ್ದು ದೇವಾಲಯದ ಕಾರ್ಯಗಳಲ್ಲಿ ತೊಡಗಿರುವವರೆ ಹೆಚ್ಚು. ಇನ್ನೂ ಕೆಲವು ಕುಟುಂಬಗಳು ಆಧುನಿಕತೆ ಬೆಳೆದಂತೆ ಉನ್ನತ ವಿದ್ಯಾಭ್ಯಾಸ ಪಡೆದು ಉನ್ನತ ಸ್ಥಾನಮಾನವನ್ನು ಅಲಂಕರಿಸಿದರೆ ಮತ್ತೆ ಕೆಲವು ಕುಟುಂಬಗಳು ಪರಂಪರೆಯಂತೆ ಅರ್ಚಕವೃತ್ತಿಯನ್ನು ಮುಂದುವರೆಸಿಕೊಂಡು ಬಂದಿದೆ. ಈ ಭಾಗದಲ್ಲಿ ಮೊದಲಿನಿಂದಲೂ ಸುಶಿಕ್ಷಿತರಾಗಿರುವ ಮೇಲ್ ವರ್ಗವಾಗಿ ಕಂಡುಬರುತ್ತಾರೆ. ಇನ್ನು ಇವರ ಭಾಷೆಯನ್ನು ಗಮನಿಸಿದಾಗ ಕೆಲವು ಕುಟುಂಬಗಳು ತಮಿಳು ಮಾತನಾಡುತ್ತಾರೆ. ಮೂಲತಃ ಇವರು ತಮಿಳು ಮೂಲದ ಬ್ರಾಹ್ಮಣರು ಎಂಬುದಕ್ಕೆ ಕೆಲವು ಆಧಾರಗಳು ಸಿಗುತ್ತವೆ. ಇಲ್ಲಿನ ಕೆಲವು ಕುಟುಂಬಗಳಿಗೆ ತಮಿಳನ್ನು ಉಚ್ಚರಿಸುವುದೇ ಕಷ್ಟಕರ ಎಂಬಂತಿದ್ದರೆ ದೇವಾಲಯದ ಪ್ರಧಾನ ಅರ್ಚಕರನ್ನು ಒಳಗೊಂಡಂತೆ ಸಹ ಅರ್ಚಕರೆಲ್ಲ ನಿರರ್ಗಳವಾಗಿ ತಮಿಳು ಮಾತನಾಡುತ್ತಾರೆ. ದೇವರಕೊಂಡಾರೆಡ್ಡಿಯವರು ತಮ್ಮ "ತಲಕಾಡು ಗಂಗರ ದೇವಾಲಯಗಳು ಒಂದು ಅಧ್ಯಯನ"ಕೃತಿಯಲ್ಲಿ ಹೇಳಿರುವಂತೆ ಗಂಗರ ಪತನದ ನಂತರ ಈ ಭಾಗದಲ್ಲಿ ಚೋಳರು ತಮ್ಮ ಪ್ರಾಬಲ್ಯವನ್ನು ಮೆರೆದಿದ್ದು ದೇವಾಲಯಗಳಿಗೆ ಹೆಚ್ಚಿನ ದಾನ-ಧರ್ಮಗಳನ್ನು ನೀಡುವುದರೊಂದಿಗೆ ಆಡಳಿತ ಅಧಿಕಾರಿಗಳನ್ನು ನೇಮಿಸಿದ್ದರು. ಆದರೆ ಚೋಳರ ಪ್ರಾಬಲ್ಯ ಕಡಿಮೆಯಾದಂತೆ ಇಲ್ಲಿನ ಅಧಿಕಾರಿಗಳು ಇಲ್ಲಿಯೇ ನೆಲೆಯನ್ನು ಕಂಡುಕೊಂಡು ವಾಸಮಾಡಲು ಪ್ರಾರಂಭಿಸಿದರ ಪರಿಣಾಮವಾಗಿ ತಮಿಳು ಪ್ರಾಬಲ್ಯವಿದೆ ಎಂಬ ವಿಚಾರ ತಿಳಿದು ಬರುತ್ತದೆ. ಆ ಕಾರಣದಿಂದಲೇ ಇಲ್ಲಿನ ಕೆಲವು ಬ್ರಾಹ್ಮಣರನ್ನು ತಮಿಳು ಬ್ರಾಹ್ಮಣರು ಎಂದು ಕರೆಯುವುದು. ಇವರು ಹೆಚ್ಚು ಸೌಮ್ಯ ಸ್ವಭಾವದವರಾಗಿದ್ದು ಸಂಪೂರ್ಣ ಸಾಕ್ಷರತೆಯನ್ನು ಸಾಧಿಸಿದ ಜನಾಂಗವಾಗಿದೆ. ಅರ್ಚಕ ಕೆಲಸ ಜಾತಕ ನೋಡುವುದು ಇತ್ಯಾದಿ ಕೆಲಸಗನ್ನು ಮಾಡುತ್ತಾರೆ. ಆರ್ಥಿಕವಾಗಿ ಸುಸ್ಥಿತಿಯಲ್ಲಿರುವುದನ್ನು ಕಾಣಬಹುದು.

ಈ ಭಾಗದಲ್ಲಿ ಅಧಿಕಾರಯುತವಾಗಿ ಹೆಚ್ಚು ಸಂಖ್ಯೆಯಲ್ಲಿ ಕಂಡುಬರುವ ಜನಾಂಗ ಒಕ್ಕಲಿಗ ಜನಾಂಗವಾಗಿದೆ. ಹೆಸರೇ ಸೂಚಿಸುವಂತೆ ಹೆಚ್ಚು ಕೃಷಿಭೂಮಿಯನ್ನು ಹೊಂದಿದ್ದು ಮೊದಲಿನಿಂದಲೂ

ಆರ್ಥಿಕವಾಗಿ ಪ್ರಾಬಲ್ಯತೆಯನ್ನು ಮೆರೆಯುತ್ತ ಬಂದಿರುವ ಜನರಿವರು. ಇವರ ಮುಖ್ಯ ಉದ್ಯೋಗ ಕೃಷಿಯಾಗಿದ್ದು, ಮಾಂಸಹಾರವನ್ನು ಸೇವಿಸುತ್ತಾರೆ. ತಮ್ಮದೇ ಆದ ವಿಧಿವಿಧಾನಗಳನ್ನು ಹೊಂದಿದ್ದು, ಶಿಷ್ಟದೇವರುಗಳ ಜೊತೆಗೆ ಗ್ರಾಮ ದೇವತೆಗಳನ್ನು ಪೂಜಿಸುತ್ತಾರೆ.

ಒಕ್ಕಲಿಗ ಜನಾಂಗದ ನಂತರದ ಸ್ಥಾನ ಸಂಖ್ಯೆಯ ದೃಷ್ಟಿಯಿಂದ ಹಿಂದುಳಿದ ವರ್ಗದವರದು. ಈ ಜನಾಂಗದಲ್ಲಿ ಮುಖ್ಯವಾಗಿ ಆದಿಕರ್ನಾಟಕ, ಆದಿದ್ರಾವಿಡ ಜನಾಂಗವನ್ನು ಗುರ್ತಿಸಬಹುದು. ಹೆಚ್ಚು ಪ್ರಮಾಣದ ಜನಸಂಖ್ಯೆಯಲ್ಲಿರುವುದನ್ನು ಗುರ್ತಿಸಬಹುದು. ಮೊದಲಿನಿಂದಲೂ ಅಲ್ಪಸ್ವಲ್ಪ ಕೃಷಿಕ ಭೂಮಿ ಹೊಂದಿದ್ದು ಕೃಷಿ ಕಾರ್ಯದ ಮೂಲಕ ಜೀವನ ಸಾಗಿಸುವ ಜನ ಒಂದುಕಡೆಯಾದರೆ ಮೊದಲಿನಿಂದಲೂ ಜೀತ, ಕೂಲಿ ಮಾಡಿಕೊಂಡು ಬದುಕುವುದನ್ನು ನೋಡಬಹುದು.

ಇವರ ಭಾಷೆಯನ್ನು ಗಮನಿಸಿದಾಗ ತಮಿಳಿಗೆ ಹತ್ತಿರವಿರುವಂತೆ ಭಾಸವಾಗುತ್ತದೆ. ಈ ರೀತಿಯ ಭಾಷೆಯನ್ನು ಮಾತನಾಡುವ ಜನರನ್ನು ಆನೇಕಲ್, ಕೋಲಾರ, ಹೊಸಕೋಟೆ ಪ್ರದೇಶಗಳಲ್ಲಿ ಹೆಚ್ಚಾಗಿ ಕಾಣುತ್ತೇವೆ. ಆದರೆ ಈ ಭಾಷೆ ಎಷ್ಟು ಪರಿವರ್ತಿತವಾಗಿದೆ ಎಂದರೆ ತಮಿಳು ಮಾತನಾಡುವವರಿಗೂ ಸಹ ಅರ್ಥ ಮಾಡಿಕೊಳ್ಳುವುದು ಕಷ್ಟ. ಅಷ್ಟರಮಟ್ಟಿಗೆ ಬದಲಾಗಿದೆ. ಅಚ್ಚಗನ್ನಡದ ಕೆಲವು ಮೂಲ ಪದಗಳು ಈಗಲೂ ಈ ಭಾಷೆಯಲ್ಲಿ ಸೇರಿಕೊಂಡು ಉಳಿದುಬಂದಿದೆ. ಮೇಲ್‌ನೋಟಕ್ಕೆ ಕನ್ನಡ, ತಮಿಳು, ತೆಲುಗು, ಭಾಷೆಗಳ ಮಿಶ್ರಿತಗೊಂಡಂತೆ ಕಂಡರೂ ತನ್ನದೇ ಆದ ಸಾಂಸ್ಕೃತಿಕ ವಿಶೇಷತೆಯನ್ನು ಪಡೆದುಕೊಂಡಿದೆ. ಈ ಭಾಷೆಗೆ ನಿರ್ದಿಷ್ಟ ಸಂರಚನೆ ಇಲ್ಲ. ಇದೊಂದು ಸಮ್ಮಿಶ್ರಭಾಷೆ ಎಂದು ಕರೆಯುವುದುಂಟು. ಕೋಲಾರ ಕಡೆಯ ಭಾಗದ ಜನರು ಈ ಭಾಷೆಯನ್ನು 'ಹರವು' ಎಂದು ಸಂಭೋಧಿಸುತ್ತಾರೆ. ಏನೇ ಆದರೂ ಮುಖ್ಯವಾಗಿ ಸಂವಹನ ಕಾರ್ಯ ಮುಖ್ಯ. ಮೊದಲಿನಿಂದಲೂ ಕೆಳಸ್ತರದಲ್ಲಿ ಬದುಕುತ್ತಾ ಬಂದಿರುವ ಈ ಜನಾಂಗ ಆಧುನಿಕತೆಯ ಪ್ರಭಾವದಿಂದ ಹೆಚ್ಚು ವಿದ್ಯಾವಂತರನ್ನು ಕಾಣುವಂತೆ ಮಾಡಿದೆ. ಹಾಗೂ ಆರ್ಥಿಕವಾಗಿ ಪ್ರಬಲರಾಗುವತ್ತ ಮುಂದಾಗುತ್ತಿರುವುದನ್ನು ಕಾಣಬಹುದು. ಈ ಜಾತಿಯಲ್ಲಿ ಎಡ-ಬಲ ಎಂಬ ಒಳಪಂಗಡಗಳಿದ್ದರೂ ಒಗ್ಗಟ್ಟಿನಿಂದ ಇರುತ್ತಾರೆ. ಆಧರೆ ಮದುವೆ ಮುಂಜಿಗಳಲ್ಲಿ ತುಂಬ ಪಾವಿತ್ರ್ಯತೆ ಪಾಲಿಸುತ್ತಾರೆ. ಯಾವುದೇ ಕಾರಣಕ್ಕೂ ಒಳಜಾತಿಗಳಲ್ಲಿರುವವರನ್ನು ಮದುವೆಯಾಗುತ್ತಿರಲಿಲ್ಲ. ಆದರೆ ಇಂದು ಅದರ ಚಿತ್ರಣವೇ ಬೇರೆಯಾಗಿದೆ. ಇವರು ಹೆಚ್ಚಾಗಿ ಗ್ರಾಮದೇವತೆಗಳನ್ನು ಪೂಜಿಸುತ್ತಾ ಬಂದಿದ್ದು ಎಲ್ಲವೂ ಹೆಣ್ಣುದೇವತೆಗಳೇ ಎಂಬುದು ವಿಶೇಷ. ಯಲ್ಲಮ್ಮದೇವಿ, ಕಾವೇರಮ್ಮದೇವಿ, ಮುನೇಶ್ವರ ಇವರು ಪೂಜಿಸುವ ಪ್ರಧಾನ ದೇವರುಗಳಾಗಿವೆ. ಮೊದಲಿನಿಂದಲೂ ಕನಿಷ್ಟ ಜೀವನ ಸಾಗಿಸುತ್ತಿದ್ದ ಇವರು ಇತ್ತೀಚಿಗಷ್ಟೇ ಸುಧಾರಿಸಿಕೊಂಡಿದ್ದಾರೆ. ಆದರೂ ಸಂಪೂರ್ಣವಾಗಿ ಬದಲಾಗಿಲ್ಲ ಎಂದು ಹೇಳಬಹುದು.

ಮೊದಲೇ ಹೇಳಿದಂತೆ ತಮಿಳು ಮೂಲದ ಭಾಷೆಯನ್ನಾಡುವ ಇವರು ಚೋಳರ ಕಾಲದಲ್ಲಿಯೇ ತಮಿಳುನಾಡಿನಿಂದ ವಲಸೆ ಬಂದಿರುವವರು ಎಂದು ತಿಳಿಯುತ್ತದೆ. ಇಲ್ಲಿನ ಪೂರ್ವಿಕರು ಅವರದೇ ಆದ ಒಂದು ಕತೆಯನ್ನು ಹೇಳುತ್ತಾರೆ. ತಮಿಳುನಾಡಿನಲ್ಲಿ ದೇವಾಲಯಗಳ ನಿರ್ಮಾಣಕ್ಕಾಗಿ ಹೆಚ್ಚು ಕೆಲಸವನ್ನು ಉಚಿತವಾಗಿ ಮಾಡಬೇಕಾಗಿತ್ತಂತೆ ಅದನ್ನು ತಪ್ಪಿಸಿಕೊಳ್ಳುವ ಸಲುವಾಗಿ ಕರ್ನಾಟಕದ ಗಡಿ ಪ್ರದೇಶಗಳಿಗೆ ವಲಸೆ ಬಂದರಂತೆ ಎಂಬ ಕತೆಯನ್ನು ಹೇಳುತ್ತಾರೆ. ಒಟ್ಟಾರೆ ಈ ಪ್ರದೇಶದಲ್ಲಿ ತಮ್ಮದೇ ಆದ ಸಾಂಸ್ಕೃತಿಕ ಮಹತ್ವವನ್ನು ಕಂಡ ಜನಾಂಗ ಎಂದು ಹೇಳಬಹುದು.

ಈ ಭಾಗದಲ್ಲಿ ಇರುವ ಮತ್ತೊಂದು ಬಹುಸಂಖ್ಯಾತ ಗುಂಪೆಂದರೆ ತಿಗಳ ಜನಾಂಗದವರದಾಗಿದೆ. ಇವರು ಸಹ ತಮಿಳಿಗೆ ಹತ್ತಿರವಿರುವ ಭಾಷೆ ಮಾತನಾಡಿದರೂ ಕೂಡ ಹಿಂದುಳಿದ ವರ್ಗದವರ ಭಾಷೆಗಿಂತಲೂ ಭಿನ್ನ. ಇವರ ಮೂಲ ವೃತ್ತಿ ತೋಟಗಾರಿಕೆ. ಆದರೆ ಈ ಭಾಗದಲ್ಲಿರುವ ಎಲ್ಲಾ ತಿಗಳ ಜನಾಂಗವೂ ಕ್ರೈಸ್ತ ಧರ್ಮವನ್ನು ಅನುಸರಿಸುವುದನ್ನು ಕಾಣುತ್ತೇವೆ. ದೊಡ್ಡ ಬೇಗೂರಿನಲ್ಲಿ ಬಹುಸಂಖ್ಯಾತರಾಗಿ ಕಂಡು ಬರುವ ಇವರು ಕ್ರೈಸ್ತಧರ್ಮದ ಆಚರಣೆಗಳನ್ನಷ್ಟೇ ಆಚರಿಸುತ್ತಾರೆ. ಈ ಊರಿನಲ್ಲಿರುವ ಚರ್ಚ್ ಇವರ ಆರಾಧನಸ್ಥಳ. ಇವರು ವಿಧಿ-ವಿಧಾನಗಳೆಲ್ಲವೂ ಸಹ ಕ್ರೈಸ್ತ ಧರ್ಮದ ಪಡಿಯಚ್ಚಾಗಿದೆ. ಆದರೆ ಆನೇಕಲ್ ಭಾಗದ ಯಾವ ಪ್ರದೇಶದಲ್ಲಿಯೂ ತಿಗಳ ಜನಾಂಗ ಕ್ರೈಸ್ತ ಧರ್ಮವನ್ನು ಅನುಸರಿಸುವುದು ಕಂಡು ಬರುವುದಿಲ್ಲ. ಈ ಜನಾಂಗ ಯಾವಾಗ ಕ್ರೈಸ್ತ ಧರ್ಮಕ್ಕೆ ಬದಲಾಯಿತು ಎಂಬುದಕ್ಕೆ ಯಾವುದೇ ಪುರಾವೆಗಳಿಲ್ಲ. ಆದರೆ ೧೮ನೇ ಶತಮಾನದಲ್ಲಿ ಇಲ್ಲಿ ಕ್ರೈಸ್ತಧರ್ಮ ತಲೆ ಎತ್ತಿದ ನಂತರ ಈ ಜನಾಂಗ ಸಂಪೂರ್ಣವಾಗಿ ಆ ಧರ್ಮಕ್ಕೆ ಮತಾಂತರ ಹೊಂದಿರಬಹುದು ಎಂದಷ್ಟೇ ಹೇಳಬಹುದು. ಇವರು ಸಹ ಹಿಂದುಳಿದ ವರ್ಗದವರಂತೆ ಸಾಧಾರಣ ಜೀವನ ಸಾಗಿಸುತ್ತ ಬಂದಿದ್ದು ಹೆಚ್ಚು ಸಾಕ್ಷರತೆಯನ್ನು ಸಾಧಿಸಿಲ್ಲ.

ಬೇಗೂರಿನಲ್ಲಿ ಲಿಂಗಾಯಿತ ಜನಾಂಗ ಬಹುಸಂಖ್ಯೆಯಲ್ಲಿ ಕಂಡುಬರುವುದಿಲ್ಲವಾದರೂ ಕೆಲವು ಕುಟುಂಬಗಳಿವೆ. ಇದೇ ಜಾತಿಗೆ ಸೇರಬಹುದಾದ ಮತ್ತೊಂದು 'ಸಾದರು' ಹೆಚ್ಚಾಗಿ ಕಂಡುಬರುತ್ತಾರೆ. ಲಿಂಗಾಯತ ಜನಾಂಗದಂತೆ ಜೀವನಶೈಲಿಯನ್ನು ರೂಢಿಸಿಕೊಂಡಿದ್ದು ಸಸ್ಯಹಾರಿಗಳಾಗಿದ್ದಾರೆ. ಆರ್ಥಿಕವಾಗಿ ಹೆಚ್ಚು ಪ್ರಾಬಲ್ಯತೆಯನ್ನು ಸಾಧಿಸಿರುವ ಜನಾಂಗವಾಗಿದೆ. ಒಕ್ಕಲಿಗರಂತೆ ಇವರು ಸಹ ಹೆಚ್ಚು ಕೃಷಿ ಭೂಮಿಯನ್ನು ಹೊಂದಿದ್ದು ಇವರ ಮುಖ್ಯ ಕಸುಬು ವ್ಯವಸಾಯ. ಇವರು ಶಿಷ್ಟ ದೇವತೆಗಳಾದ ವಿಷ್ಣು ಮತ್ತು ಶೈವ ದೇವರುಗಳನ್ನು ಪೂಜಿಸುತ್ತಾರೆ. ಈ ಜನಾಂಗದ ಮೂಲಭಾಷೆ ತೆಲುಗಾಗಿದ್ದು ಹೆಚ್ಚಾಗಿ ಹೈದರಾಬಾದ್-ಕರ್ನಾಟಕ ಗಡಿಭಾಗದಲ್ಲಿ ಕಂಡು ಬರುತ್ತಾರೆ. ಬೇಗೂರಿನಲ್ಲಿ ಅಲ್ಪಸಂಖ್ಯಾತರಾಗಿ ಕಂಡು ಬರುವ ಇವರು ಹೈದರಾಬಾದ್-ಕರ್ನಾಟಕ

ಪ್ರದೇಶದಿಂದ ವಲಸೆ ಬಂದಿರಬಹುದು ಎಂದು ಊಹಿಸಬಹುದು. ಕಾರಣ ಇವರು ಹೆಚ್ಚಿನ ಬಾಂಧವ್ಯ ಆ ಪ್ರದೇಶದ ಕಡೆಗಿದೆ.

ಬೇಗೂರಿನಲ್ಲಿ ಕಂಡು ಬರುವ ಬಹುಮುಖ್ಯ ಜಾತಿ ಸಮುದಾಯಗಳೆಂದು ಮೇಲಿನಂತೆ ಚರ್ಚಿಸಿದರೂ ಸಹ ಈ ಭಾಗದಲ್ಲಿ ಹಲವಾರು ಜಾತಿಗಳು ಸಣ್ಣ ಪ್ರಮಾಣದಲ್ಲಿ ಕಂಡುಬರುತ್ತಾರೆ. ಆಚಾರಿಗಳು, ನಾಯಕ್, ರೆಡ್ಡಿ ಜನಾಂಗ ಇತ್ಯಾದಿ. ಆದರೆ ಇಷ್ಟೇಲ್ಲ ಜಾತಿಗಳು ಈ ಪ್ರದೇಶದಲ್ಲಿ ಇದ್ದರೂ ಸಹ ಮುಖ್ಯವಾಗಿ ಜಾತಿಸಂಘರ್ಷ ನಡೆದಿರುವುದು ತುಂಬ ವಿರಳ. ಅಲ್ಪಸಂಖ್ಯಾತರು ಹಾಗೂ ಒಕ್ಕಲಿಗ ಜನಾಂಗದ ನಡುವೆ ಕೃಷಿ ಭೂಮಿಗಾಗಿ ಜಾತಿ ಸಂಘರ್ಷ ಅಲ್ಪಪ್ರಮಾಣದಲ್ಲಿ ನಡೆದಿದ್ದು ಕಂಡು ಬಂದರು ಮುಂದುವರೆದುಕೊಂಡು ಬಂದಿಲ್ಲ. ಎಲ್ಲಾ ಜತಿ ಜನಾಂಗದವರು ಒಗ್ಗಟ್ಟಿನಿಂದ ಸಾಂಸ್ಕೃತಿಕ ಕಾರ್ಯಕ್ರಮಗಳು, ಆಚರಣೆಗಳನ್ನು ನಡೆಸಿಕೊಂಡು ಬಂದಿರುವುದನ್ನು ಕಾಣುತ್ತೇವೆ.

**ಧರ್ಮವ್ಯವಸ್ಥೆ:-**

ಬೇಗೂರಿನಲ್ಲಿ ಮುಖ್ಯವಾಗಿ ನಾಲ್ಕು ಧರ್ಮಗಳನ್ನು ಗುರ್ತಿಸಬಹುದು. ಪ್ರಾಚೀನ ಕಾಲದಿಂದ ಇಂದಿನವರೆಗೂ ಇಲ್ಲಿ ಸಿಗುವ ಆಧಾರಗಳನ್ನು ಪರಿಗಣಿಸಿ

- ಜೈನಧರ್ಮ
- ಹಿಂದೂಧರ್ಮ
- ಕ್ರೈಸ್ತಧರ್ಮ
- ಮುಸ್ಲಿಂ ಧರ್ಮ

ಎಂದು ನಾಲ್ಕು ಧರ್ಮಗಳನ್ನು ಅಧಿಕೃತವಾಗಿ ಗುರ್ತಿಸಬಹುದು. ಬೇಗೂರು ಕ್ಷೇತ್ರದಲ್ಲಿ ೮ನೇ ಶತಮಾನದಲ್ಲಿಯೇ ಸಾಂಸ್ಕೃತಿಕವಾಗಿ ಮಹತ್ವಯುತವಾದ ಪ್ರದೇಶವಾಗಿ ಬೇಗೂರು ಕಂಡುಬರುತ್ತದೆ. ಪ್ರಾರಂಭದ ಕಾಲದಲ್ಲಿ ಇಲ್ಲಿ ಜೈನಧರ್ಮ ಹೆಚ್ಚು ಪ್ರಾಬಲ್ಯತೆಯನ್ನು ಪಡೆದಿತ್ತು ಎಂಬುದಕ್ಕೆ ಕುರುಹುಗಳು ಸಿಗುತ್ತವೆ. ಬೇಗೂರು ದಿಣ್ಣೆಯಲ್ಲಿ ಈಗಲೂ ಸಹ ತೀರ್ಥಂಕರರ ವಿಗ್ರಹಗಳು ಭಗ್ನಗೊಂಡು ಅನಾಥವಾಗಿ ಬಿದ್ದಿರುವುದನ್ನು ಕಾಣಬಹುದು. ಹಾಗೂ ವಿದ್ವಾಂಸರ ಪ್ರಕಾರ ಇಲ್ಲಿ ಜೈನಧರ್ಮ ಮೊದಲಿನಿಂದ ನೆಲೆಗೊಂಡಿದ್ದು ಮಧ್ಯಂತರದಲ್ಲಿ ಧರ್ಮ ಸಂಘರ್ಷದೊಂದಿಗೆ ಸಂಪೂರ್ಣ ನಾಶಹೊಂದಿದೆ. ಅಥವಾ ವಲಸೆ ಹೋಗಿರಬೇಕು ಎಂದು ಹೇಳುತ್ತಾರೆ. ಇವರ ಹೇಳಿಕೆಗೆ ಪುಷ್ಠಿ ಕೊಡುವಂತೆ ಒಂದು ಬಸದಿಯ ಅವಶೇಷಗಳನ್ನು ಕಾಣಬಹುದು. ಆದರೆ ಇಲ್ಲಿ ಯಾರು ಯಾರಿಗೆ ಸಂಘರ್ಷ ನಡೆಯಿತು ಎಂಬುದಕ್ಕೆ ಉಲ್ಲೇಖಗಳಿಲ್ಲ. ಕೋಟೆಯ ಒಂದು ಕಂಬದ ಮೇಲೆ ನಾಗತ್ತರನ ಮಗಳಾದ ತೊಣ್ಡಬ್ಬೆಯ 'ಸನ್ಯಾಸನಗೈದು ಮುಡಿಪಿದಳು' ಎಂಬ ಶಾಸನವಿದೆ. ಸಾಮಾನ್ಯವಾಗಿ ಜೈನ ಧರ್ಮದಲ್ಲಿ ಸಲ್ಲೇಖನ ವ್ರತ

ಕೈಗೊಳ್ಳುವ ಮೂಲಕ ಸಾವಿಗೆ ಶರಣಾಗುವುದನ್ನು ಕಾಣುತ್ತೇವೆ. ಆದ್ದರಿಂದ ಗಂಗರ ಕಾಲದಲ್ಲಿಯೇ ತೊನ್ನಬ್ಬೆ ಜೈನಧರ್ಮಿಯಳಾಗಿದ್ದಳು ಎಂಬ ವಿಚಾರ ತಿಳಿಯುತ್ತದೆ. ಆದರೆ ಇಂದು ಜೈನಧರ್ಮದ ಅವಶೇಷಗಳಷ್ಟೇ ಇದೆಯೇ ವಿನಃ ಜೈನಧರ್ಮ ಸಂಪೂರ್ಣವಾಗಿ ನಾಶಹೊಂದಿದೆ. ಚೋಳರ ಆಗಮನದ ನಂತರ ಈ ಪ್ರದೇಶದಲ್ಲಿ ವೈಷ್ಣವ ಪಂಗಡದವರಿಗೂ ಜೈನಧರ್ಮಿಯರಿಗೂ ಧರ್ಮಸಂಘರ್ಷ ನಡೆದು ಜೈನಧರ್ಮ ಸಂಪೂರ್ಣವಾಗಿ ನಾಶವಾಗಿದೆ. ಈಗಲೂ ಸಹ ರುಂಡವಿಲ್ಲದ ಸುಂದರವಾದ ಜೈನ ತೀರ್ಥಂಕರನ ಮೂರ್ತಿಗಳನ್ನು ಗಮನಿಸಿದರೆ ತಿಳಿಯುತ್ತದೆ.

**ಹಿಂದೂಧರ್ಮ:–**

ಬೇಗೂರು ಸಂಪೂರ್ಣವಾಗಿ ಅಧಿಕ ಪ್ರಮಾಣದಲ್ಲಿ ಹಿಂದೂಧರ್ಮಕ್ಕೆ ಒಳಪಟ್ಟಿದೆ. ಜಾತಿವ್ಯವಸ್ಥೆಯಲ್ಲಿ ಚರ್ಚಿಸಿದಂತ ತಿಗಳ ಜನಾಂಗ ಹಾಗೂ ಮುಸ್ಲಿಂ ಜನಾಂಗವನ್ನು ಹೊರತು ಪಡಿಸಿ ಮಿಕ್ಕೆಲ್ಲ ಜಾತಿಗಳವರು ಹಿಂದೂಧರ್ಮವನ್ನು ಅನುಸರಿಸುತ್ತ ಬಂದಿರುವುದು ಸಾಮಾನ್ಯ. ಇಲ್ಲಿನ ಪ್ರಮುಖ ಆಚರಣೆಗಳಾದ ನಾಗೇಶ್ವರ ದೇವರ ಬ್ರಹ್ಮರಥೋತ್ಸವ, ಊರಬ್ಬ, ಹಿಂದೂಧರ್ಮದ ಪ್ರಮುಖ ಆಚರಣೆಗೊಳಾಗಿದೆ. ಈ ಭಾಗದ ಅತಿ ಪ್ರಾಚೀನ ಧರ್ಮ ಎಂದು ಹೇಳಬಹುದು.

**ಕ್ರೈಸ್ತಧರ್ಮ:–**

ಹಿಂದೂಧರ್ಮದ ನಂತರ ಎರಡನೆಯ ಸ್ಥಾನದಲ್ಲಿರುವ ಧರ್ಮವೇ ಈ ಕ್ರೈಸ್ತ ಧರ್ಮವಾಗಿದೆ. ಇಲ್ಲಿ ಸುಮಾರು ೧೮ನೇ ಶತಮಾನದಲ್ಲಿಯೇ ಈ ಧರ್ಮ ಪ್ರವೇಶಿಸಿದ್ದು, ಈ ಭಾಗದ ತಿಗಳ ಜನಾಂಗ ಸಂಪೂರ್ಣವಾಗಿ ಈ ಧರ್ಮವನ್ನು ಅನುಸರಿಸುತ್ತಾರೆ. ಸುಂದರವಾದ ಕ್ಯಾಥೋಲಿಕ್ ರೋಮನ್ ಚರ್ಚ್ ಇದ್ದು ಅದರ ಅಧೀನದಲ್ಲಿ ಸಾರ್ವಜನಿಕವಾಗಿ ಒಂದು ವಿದ್ಯಾಸಂಸ್ಥೆಯನ್ನು ಸಹ ನಡೆಸಲಾಗುತ್ತಿದೆ. ಪ್ರತಿನಿತ್ಯ ಪ್ರಾರ್ಥನೆ ನಡೆಯುತ್ತದೆ. ಇವರು ಕ್ರಿಸ್ತರ ಜಯಂತಿ, ಕ್ರಿಸ್ತನ ಜಾತ್ರೆ, ಕ್ರಿಸ್‌ಮಸ್ ಪ್ರಮುಖ ಆಚರಣೆಗಳನ್ನಾಗಿ ಅದ್ದೂರಿಯಾಗಿ ಆಚರಿಸುತ್ತಾರೆ.

**ಮುಸ್ಲಿಂಧರ್ಮ:–**

ಈ ಭಾಗದಲ್ಲಿ ಮುಸ್ಲಿಂ ಧರ್ಮಕ್ಕೆ ಪ್ರಾಚೀನ ಇತಿಹಾಸವಿಲ್ಲ. ತುಂಬ ಇತ್ತೀಚಿಗೆ ಅಂದರೆ ೨–೩ ದಶಕಗಳಿಂದಷ್ಟೇ ಇಲ್ಲಿ ಮುಸ್ಲಿಂ ಧರ್ಮ ನೆಲೆಗೊಂಡಿದೆ. ಈ ಧರ್ಮದವರು ಅಲ್ಪಸಂಖ್ಯಾತರಾಗಿದ್ದು, ಇತ್ತೀಚಿಗೆ ಒಂದು ಸಣ್ಣದಾದ ಮಸೀದಿಯನ್ನು ನಿರ್ಮಿಸಿಕೊಂಡಿದ್ದಾರೆ. ಇವರು ಮುಖ್ಯವಾಗಿ ವ್ಯಾಪಾರದಲ್ಲಿ ತೊಡಗಿರುವುದು ಕಂಡುಬರುತ್ತದೆ. ಸಾರ್ವತ್ರಿಕವಾಗಿ ಯಾವುದೇ ಆಚರಣೆಗಳನ್ನು ಮಾಡುವುದಿಲ್ಲ.

ಒಟ್ಟಾರೆಯಾಗಿ ಜಾತಿ ಮತ್ತು ಧರ್ಮ ವ್ಯವಸ್ಥೆಯನ್ನು ನೋಡಿದಾಗ ಬಹುಸಂಖ್ಯಾತ ಧರ್ಮ ಹಾಗೂ ಜಾತಿ ಇರುವುದು ಹಿಂದೂ ಹಾಗೂ ಕ್ರೈಸ್ತಧರ್ಮಿಯರು. ಆದರೆ ಇದುವರೆಗೂ ಯಾವುದೇ

ಧರ್ಮೀಯ ಗಲಭೆಗಳು ನಡೆದಿಲ್ಲ ಎಂಬುದೇ ಇಲ್ಲಿನ ವಿಶೇಷತೆ. ಸಾಂಸ್ಕೃತಿಕವಾಗಿ ಎಲ್ಲಾ ಧರ್ಮೀಯರು ಸಾಮರಸ್ಯದಿಂದ ಸಾಗುತ್ತಿದ್ದು ಸೌಜನ್ಯತೆಯಿಂದ ಒಂದು ಧರ್ಮವನ್ನು ಮತ್ತೊಂದು ಧರ್ಮ ಗೌರವಿಸುತ್ತಲೇ ಭಾವೈಕ್ಯತೆಯನ್ನು ಮೆರೆದಿದೆ. ಹಲವು ಧರ್ಮಗಳ, ಜಾತಿಗಳ ನಡುವೆ ಏಕತೆಯಿಂದಿದ್ದು ಸಾಂಸ್ಕೃತಿಕವಾಗಿ ತನ್ನದೇ ಆದ ವಿಧಿ-ವಿಧಾನಗಳನ್ನು ರೂಢಿಸಿಕೊಂಡು ಮಾದರಿ ಕ್ಷೇತ್ರವಾಗಿದೆ.

**೫.೨ : ಆಚರಣೆಗಳು:-**

ಆಚರಣೆ ಎಂದಾಕ್ಷಣ ನಮಗೆ ಹಬ್ಬಗಳ ನೆನಪಾಗುವುದುಂಟು. ಮೂಲಾರ್ಥದಲ್ಲಿ ಆಚರಣೆ ಎಂಬುದು ಅನುಸರಿಸುವುದು ಎಂಬ ಅರ್ಥದಲ್ಲಿ ಬಳಸುತ್ತಾರೆ. ಯಾವುದೇ ಒಂದು ನಿರ್ದಿಷ್ಟ ಪ್ರಕ್ರಿಯೆಯನ್ನು ನಿರ್ದಿಷ್ಟ ಕಾಲಮಾನದಲ್ಲಿ ಅನುಸರಿಸುತ್ತ ಬರುವುದು ಎಂಬರ್ಥವನ್ನು ನಾವು ನೀಡಬಹುದು. ಆಚರಣೆ ಎಂಬುದು ಅತಿ ಪ್ರಾಚೀನ ಕಾಲದಿಂದಲೇ ಅನುಸರಿಸುತ್ತ ಬರಬೇಕು ಅಂತಹುಗಳನ್ನು ಮಾತ್ರ ಆಚರಣೆ ಎಂದು ಕರೆಯುತ್ತಾರೆ ಎಂಬ ವಿಚಾರ ಒಪ್ಪತಕ್ಕದ್ದಲ್ಲ. ಇಂಥ ವಾದವನ್ನು ಧಾರ್ಮಿಕ ಆಚರಣೆಗಳನ್ನು ಮನದಲ್ಲಿ ಇಟ್ಟುಕೊಂಡು ಹೇಳಿದ ಮಾತುಗಳಾಗಿರುತ್ತವೆ. ಇಂದು ಆಚರಣೆ ಎಂಬುದು ಬಹು ವಿಸ್ತಾರವಾಗಿ ಬೆಳೆದಿದೆ. ಅದು ಪ್ರಾಚೀನ ವಿಷಯವೇ ಆಗಿರಲಿ, ಆಧುನಿಕ ವಿಷಯವೇ ಆಗಿರಲಿ ಒಂದು ನಿರ್ದಿಷ್ಟ ಕಾರ್ಯಕ್ರಮವನ್ನು ಸುವ್ಯವಸ್ಥಿತವಾದ ರೀತಿಯಲ್ಲಿ ಅನುಸರಿಸಿಕೊಂಡು ಬರುವುದಾಗಿದೆ. ಆ ಕಾರಣದಿಂದಲೇ ನಾವು ಪ್ರತಿ ಹಬ್ಬಗಳನ್ನು ರಾಷ್ಟ್ರೀಯ ದಿನಾಚರಣೆಗಳನ್ನು ಒಂದು ನಿರ್ದಿಷ್ಟ ಕಾರ್ಯಕ್ರಮವನ್ನು ಆಚರಣೆ ಎಂಬ ಸೂಕ್ತಪದದಿಂದ ಕರೆಯಲ್ಪಡುವುದು.

ಆಚರಣೆ ಎಂಬುದು ಯಾವುದೇ ಕಟ್ಟುನಿಟ್ಟಿಗೆ ಒಳಪಡುವುದಿಲ್ಲ. ಕೆಲವು ಆಚರಣೆಗಳು ಕಾರಣಾಂತರಗಳಿಂದ ನಿಲ್ಲಬಹುದು. ಮತ್ತೆ ಕೆಲವು ಹೊಸ ಹೊಸ ರೂಪ ಪಡೆದು ಹುಟ್ಟಿಕೊಳ್ಳಬಹುದು. ಆದರೆ ಈ ಅನುಸರಣಿಕೆ ಎಂಬುದು ಪ್ರಾಚೀನ ರೂಪದಲ್ಲಿಯೇ ನಿಲ್ಲದೆ ಬದಲಾವಣೆಯನ್ನು ಬಯಸುತ್ತ ಕಾಲದಿಂದ ಕಾಲಕ್ಕೆ, ಪರಿಸ್ಥಿತಿ, ಪರಿಸರ, ಅಭಿರುಚಿ ಮುಂತಾದ ವಿಷಯಗಳ ಕಾರಣದಿಂದ ಬದಲಾವಣೆಯನ್ನು ನಿರಂತರ ಪಡೆಯುತ್ತಾ ಬರುತ್ತದೆ. ನಮ್ಮ ಪೂರ್ವಿಕರು ಹೇಳುವಂತೆ ನಮ್ಮ ಕಾಲದ ಆಚರಣೆಯಷ್ಟು ಇಂದಿನ ಯಾವುದೇ ಆಚರಣೆ ಬರುವುದಿಲ್ಲ. ಇಂದು ಕಲಿಗಾಲ ಎಲ್ಲವೂ ದೋಷಮಯ ಎಂಬುದು. ಆದರೆ ಅದು ಅವರ ಅಭಿರುಚಿ, ಆಚರಣೆಗಳು ಬದಲಾಗಬಾರದು ಎಂದು ಯಾರು ಸಹ ಆಜ್ಞೆ ಮಾಡಲಾಗುವುದಿಲ್ಲ. ಅದು ಸಹಜವಾಗಿಯೇ ಬದಲಾಗುವ ಗುಣವನ್ನು ಹೊಂದಿದೆ ಎಂದು ಹೇಳಬಹುದು. ಆದ್ದರಿಂದಲೇ ಕಂಠೀರವನರಸರಾಜ ಒಡೆಯರ ಕಾಲದಲ್ಲಿ ಇದ್ದ ದಸರಾ ಉತ್ಸವದ ಸ್ವರೂಪಕ್ಕೂ ಇಂದಿನ ಉತ್ಸವಕ್ಕೂ ಅಪಾರ ವ್ಯತ್ಯಾಸವನ್ನು ಗುರ್ತಿಸುತ್ತಾರೆ.

ಆಚರಣೆಯು ಒಂದು ನಿರ್ಧಿಷ್ಟ ಪ್ರದೇಶದ ಸಾಮಾಜಿಕ, ಆರ್ಥಿಕ, ಜೀವನವನ್ನು ತಿಳಿಯಲು ಬಳುವಳಿಯಾಗಿ ಬಂದ ಪದ್ದತಿ ಎಂದರೆ ತಪ್ಪಾಗಲಾರದು. ಒಂದು ಊರಿನ ಬಗ್ಗೆ ಸಾಂಸ್ಕೃತಿಕವಾಗಿ ನೋಡಲು ಹೊರಟವರಿಗೆ ಆಚರಣೆ ಎಂಬುದು ಆ ಪ್ರದೇಶದ ಜನಜೀವನದ ಬಗ್ಗೆ ತಿಳಿಯಲು ಬಹು ಸಹಾಯಕವಾಗುತ್ತದೆ. ಸಾಂಸ್ಕೃತಿಕ ಅಧ್ಯಯನದಲ್ಲಿ ಆಚರಣೆ ಎಂಬುದು ಪ್ರಮುಖ ಪಾತ್ರವನ್ನು ವಹಿಸುತ್ತದೆ. ಆಧುನಿಕ ಭರಾಟೆಯಲ್ಲಿ ಜಾನಪದ ಸಂಸ್ಕೃತಿ ಮರೆಯಾಗುತ್ತಿದೆ ಎಂಬ ಕೂಗು ಕೇಳಿ ಬರುತ್ತಿದ್ದರೂ ಕೂಡ ಎಲ್ಲೋ ಅದು ಇನ್ನೂ ಹೆಚ್ಚು ಹೆಚ್ಚು ಪ್ರಚಾರಕ್ಕೆ ಆಚರಣೆಗೆ ಬರುತ್ತಿದೆ ಎಂದೆನಿಸುತ್ತದೆ. ಯಾಂತ್ರಿಕ ಬದುಕಿನ ಜಂಜಾಟದಲ್ಲಿ ಮನಸ್ಸಿನ ಎಲ್ಲಾ ಜಿಡ್ಡನ್ನೂ ತೊಲಗಿಸಿ ಮೈ-ಮನವನ್ನು ಪ್ರಪುಲ್ಲಗೊಳಿಸುತ್ತಿದೆ. ತನ್ನ ಮನಸ್ಸಿನ ಎಲ್ಲಾ ನೋವು ಸಂಕಟ, ದುಃಖ, ಆಯಾಸ, ಬೇಸರಗಳನ್ನು ಕುಟುಂಬದ ಸದಸ್ಯರೊಡಗೂಡಿ ಹಬ್ಬ ಹರಿದಿನಗಳಲ್ಲಿ, ಜಾತ್ರೆಗಳಲ್ಲಿ, ಪೂಜೆ-ಪುನಸ್ಕಾರಗಳಲ್ಲಿ ತೊಡಗಿ ಎಲ್ಲವನ್ನೂ ಮರೆತು ಸುಖ ಜೀವಿಯಾಗಿರುತ್ತಾರೆ. ಅದಕ್ಕೆ ಹೀಗ ಎಲ್ಲಾ ಕ್ಷೇತ್ರಗಳಲ್ಲೂ ದೇಶಿಯತೆ, ದೇಶಿಯ ಚಿಂತನೆ, ಜಾನಪದ ಸೊಗಡು ಜಾನಪದ ಲಯಗಳ ಕಡೆ ಮನಸ್ಸು ಹರಿಯುತ್ತಿದೆ. ಇಂತಹ ಜಾನಪದೀಯ ಅಂಶಗಳಲ್ಲಿ ಒಂದು ಜಾತ್ರೆಗಳು.

ಬೇಗೂರು ಪ್ರದೇಶದಲ್ಲಿ ನಡೆಯುವ ಕೆಲವು ಮುಖ್ಯ ಆಚರಣೆಗಳೆಂದರೆ ಬೇಗೂರಿನ ಬ್ರಹ್ಮರಥೋತ್ಸವ, ಊರಬ್ಬ ಹಾಗೂ ಕ್ರಿಸ್ತನ ಜಯಂತಿ. ಬೇಗೂರಿನ ಸಾಂಸ್ಕೃತಿಕ ಅಧ್ಯಯನದಲ್ಲಿ ಈ ಮೂರು ಆಚರಣೆಗಳು ಮೊದಲಿನಿಂದಲೂ ನಡೆಯುತ್ತ ಬಂದಿರುವುದನ್ನು ಕಾಣುತ್ತೇವೆ. ಮೊದಲೇ ಹೇಳಿದಂತೆ ೧೨೦೦ ವರ್ಷಗಳ ಹಿಂದೆಯೇ ಈ ಪ್ರದೇಶ ಜನನಿಬಿಡ ಪ್ರದೇಶವಾಗಿತ್ತು ಎಂಬುದಕ್ಕೆ ನಮಗೆ ಸ್ಪಷ್ಟ ಆಧಾರಗಳು ಸಿಗುತ್ತವೆ. ಅದರಲ್ಲೂ ಗಂಗರ ಮಾಂಡಲಿಕ ಪ್ರದೇಶವಾದ್ದರಿಂದ ವಿಶೇಷತೆ ಈ ಪ್ರದೇಶಕ್ಕಿದೆ ಎನ್ನಬಹುದು.

**ನಾಗೇಶ್ವರಸ್ವಾಮಿ ಬ್ರಹ್ಮರಥೋತ್ಸವ:-**

ಬೆಂಪೂರು-೧೨ರ ಕ್ಷೇತ್ರದಲ್ಲಿ ನಡೆಯುವ ಆಚರಣೆಯಲ್ಲಿ ಇದು ಮೊದಲನೆ ಸ್ಥಾನದಲ್ಲಿ ನಿಲ್ಲುತ್ತದೆ. ಬೇಗೂರಿನಲ್ಲಿ ಪ್ರತಿಷ್ಠಾಪಿಸಲಾದ ನಾಗೇಶ್ವರಸ್ವಾಮಿಗೆ ಪರಂಪರೆಯಿಂದ ಪ್ರತಿವರ್ಷ ಶೈವಾಗಮಾರೀತ್ಯ ಜಾತ್ರೆಯನ್ನು ನಡೆಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ನಾಗತ್ತರನ ಕಾಲದಲ್ಲಿ ನಿರ್ಮಿಸಿರುವ ದೇವಾಲಯದಲ್ಲಿ ಲಿಂಗವನ್ನು ಪ್ರತಿಷ್ಠಾಪಿಸಿರುವುದಲ್ಲದೆ, ಮೆರವಣಿಗೆಯ ದೃಷ್ಟಿಯಿಂದ ಪಾರ್ವತಿ ಸಮೇತ ಶಿವನ ಮೂರ್ತಿಗಳನ್ನು ಸಹ ಕಾಣಬಹುದು. ಈ ಜಾತ್ರೆ ಹಾಗೂ ದೇವಾಲಯದ ವಿಶೇಷವೆಂದರೆ ಜಾತ್ರೆಯ ಸಮಯದಲ್ಲಿ ಪಂಚಲಿಂಗಗಳ ದರ್ಶನವನ್ನು ಪಡೆಯಲು ಜನರಿಗೆ ಅವಕಾಶ ಮಾಡಿಕೊಡಲಾಗುವುದು ಹಾಗೂ ಈ ಬ್ರಹ್ಮರಥೋತ್ಸವವು ನಿರ್ಧಿಷ್ಟ ಪಡಿಸಿದ ದಿನಾಂಕದಂದು ನಡೆದರು ಸಹ ಇಲ್ಲಿನ ವಿಧಿ-ಸಂಪ್ರದಾಯಗಳು ಮಾತ್ರ ೧೪ ದಿನಗಳ ಕಾಲ ನಿರಂತರವಾಗಿ ನಡೆಯುತ್ತವೆ.

ಪ್ರತಿವರ್ಷ ಶ್ರೀರಾಮನವಮಿ ಮುಗಿದು ೯ ದಿನಗಳಿಗೆ ಸರಿಯಾಗಿ ಒಂದು ಸೋಮವಾರ ಈ ಬ್ರಹ್ಮರಥೋತ್ಸವ ಜರುಗುವುದು ಒಂದು ವಿಶೇಷ. ಬೇಗೂರು ಮತ್ತು ಚಿಕ್ಕಬೇಗೂರು ಗ್ರಾಮಸ್ಥರಿಗೆ ಹಾಗೂ ಬೆಂಪೂರು-೧೨ರ ವ್ಯಾಪ್ತಿಗೆ ಬರುವ ಪ್ರತಿಯೊಬ್ಬ ಪ್ರಜ್ಞಾ ವ್ಯಕ್ತಿಗೂ ಸಹ ಈ ಅರಿವಿರುತ್ತದೆ. ಅವರಿಗೆ ಆಹ್ವಾನ ಪತ್ರಿಕೆ ತಲುಪುವ ಮೊದಲೇ ಜಾತ್ರೆಯ ದಿನಾಂಕವನ್ನು ಗುರ್ತಿಸಿಕೊಂಡಿರುತ್ತಾರೆ. ಅಷ್ಟು ನಿಖರವಾಗಿ ಈ ಆಚರಣೆ ಜರುಗುತ್ತ ಬಂದಿರುವುದನ್ನು ಕಾಣಬಹುದು.

ಇನ್ನು ಈ ಆಚರಣೆಯನ್ನು ವಿವರಣಾತ್ಮಕವಾಗಿ ನೋಡಿದಾಗ ಶ್ರೀರಾಮನವಮಿ ಮುಗಿದ ನಂತರದ ದಿನದಿಂದಲೇ ಇಲ್ಲಿ ಜಾತ್ರೆಯ ಸಿದ್ಧತೆ ಪ್ರಾರಂಭವಾಗುತ್ತದೆ. ಇಲ್ಲಿಯೂ ಸಹ ಜಾತ್ರೆಯ ಸಿದ್ಧತೆ ನಡೆಯುವುದು ಸೋಮವಾರದಿಂದಲೇ ಜಾತ್ರೆ ಪ್ರಾರಂಭಿಸುವ ದಿನವನ್ನು ಅಂಕುರಾರ್ಪಣ, ಮೃತ್ಸಂಗ್ರಹಣ ಯಾಗಶಾಲ ಪ್ರವೇಶದ ಮೂಲಕ ಪ್ರಾರಂಭ. ಅಂದರೆ ಶುಭವಾದ ಕಾರ್ಯಕ್ಕೆ ಮುಂದಾಗುವುದು ಎಂಬುದು ಇದರ ಅರ್ಥ. ಎಲ್ಲಾ ಸಿದ್ಧತೆಯೊಂದಿಗೆ ಆ ದಿನ ಒಂದು ವಿಶೇಷ ಪೂಜೆಯೊಂದಿಗೆ ಜಾತ್ರೆಗೆ ಚಾಲನೆ ನೀಡಲಾಗುವುದು. ಹಾಗೆಯೇ ರಥವನ್ನು ಸಿದ್ಧಗೊಳಿಸುವ ಕಾರ್ಯ ಪ್ರಾರಂಭಿಸಲಾಗುವುದು. ನಂತರದ ದಿನದಲ್ಲಿ 'ಧ್ವಜಾರೋಹಣ' ಕಾರ್ಯಕ್ರಮವನ್ನು ಮಾಡಲಾಗುವುದು. ಜಾತ್ರೆಯ ಅಸ್ತಿತ್ವವನ್ನು ಕುರಿತಾದ ಸಂಕೇತ ಎಂಬ ದೃಷ್ಟಿಯಿಂದ ಈ ಆಚರಣೆಯನ್ನು ಮಾಡಲಾಗುತ್ತದೆ. ನಂತರ ಪ್ರತಿದಿನ ಮುಂದುವರಿದಂತೆ 'ಸೂರ್ಯ ಮಂಡಲೋತ್ಸವ', 'ಚಿತ್ರಗೋಪುರೋತ್ಸವ', 'ನಂದಿವಾಹನೋತ್ಸವ', 'ಕಾಶೀಯಾತ್ರೆ', 'ಗಿರಿಜಾಕಲ್ಯಾಣೋತ್ಸವ', 'ವೃಷಭವಾಹನೋತ್ಸವ', 'ಶೇಷವಾಹನೋತ್ಸವ' ಈ ಎಲ್ಲಾ ಕಾರ್ಯಗಳನ್ನು ಅರ್ಥಗರ್ಭಿತವಾಗಿ ಮಾಡಲಾಗುವುದು.

ಈ ಉತ್ಸವಗಳಲ್ಲಿ ಗಿರಿಜಾಕಲ್ಯಾಣೋತ್ಸವ ವಿಶೇಷವೆನಿಸುತ್ತದೆ. ಈ ಉತ್ಸವದಲ್ಲಿ ಶಿವನ ಕಡೆಯವರು ಮತ್ತು ಗಿರಿಜೆಯ ಕಡೆಯವರು ಎಂದು ಎರಡು ಗುಂಪುಗಳನ್ನಾಗಿ ಮಾಡಿಕೊಂಡು ಮದುವೆಗೆ ಗಂಡುಹೆಣ್ಣಿನ ಕಡೆಯವರ ಮಧ್ಯೆ ಸಂಪ್ರದಾಯದ ಕೊಡಕೊಳ್ಳುವಿಕೆಯ ಕಾರ್ಯ ನಡೆಯುತ್ತದೆ. ಗಂಡಿನ ಕಡೆಯವರು ಅಂದರೆ ಶಿವನ ಕಡೆಯವರು ದರ್ಪದಿಂದಲೂ, ಗಿರಿಜೆಯ ಕಡೆಯವರು ಸೌಮ್ಯಸ್ವಭಾವದಿಂದಲೂ ವರ್ತಿಸುವುದು ಒಂದು ರೀತಿ ನಿಜವಾದ ಸಹಜ ಜೀವನವನ್ನು ಕಟ್ಟಿಕೊಡುತ್ತದೆ. ಗಂಡಿನ ಕಡೆಯವರು ಮದುವೆಗೆ ಹಲವಾರು ಬೇಡಿಕೆಗಳನ್ನು ಒಡ್ಡುವುದು. ಅದನ್ನು ಹೆಣ್ಣಿನ ಕಡೆಯವರು ತಿರಸ್ಕರಿಸಿದಾಗ ಗಂಡಿನ ಕಡೆಯವರು ಮದುವೆಯನ್ನು ತೊರೆದು ಹೋಗುವುದು ಅವರನ್ನು ಪುನಃ ಒಲಿಸಿ ಕರೆತಂದು ಕೂರಿಸಿ ಮಾತುಕತೆ ಮಾಡುವುದು ಈ ಎಲ್ಲವೂ ನಾಟಕೀಯವಾದರೂ ನೋಡುಗರ ಮುಖದಲ್ಲಿ ಸಹಜವೇ ಎಂಬಂತೆ ಮಂದಹಾಸವನ್ನು ಮೂಡಿಸುತ್ತದೆ. ಇಂದು ಈ ಸ್ಥಿತಿಯನ್ನು ಪ್ರಧಾನ-ಅಧೀನದ ದೃಷ್ಟಿಯಿಂದ ಮಹಿಳಾ ಹೋರಾಟಗಾರ್ತಿಯರು ಕಾಣಬಹುದು. ಅದರ ಚರ್ಚೆ ಇಲ್ಲಿ ಅನಾವಶ್ಯಕ. ಈ ಕಾರ್ಯಗಳು ಮುಗಿದ ನಂತರ ಶಿವನೊಂದಿಗೆ

ಗಿರಿಜಾಕಲ್ಯಾಣೋತ್ಸವವನ್ನು ವಿಜೃಂಭಣೆಯಿಂದ ಆಚರಿಸಲಾಗುವುದು. ಈ ಎಲ್ಲ ಉತ್ಸವಗಳ ತರುವಾಯ ೮ನೇ ದಿನದಂದು ಬ್ರಹ್ಮರಥೋತ್ಸವವನ್ನು ಅದ್ದೂರಿಯಾಗಿ ಆಚರಿಸಲಾಗುವುದು. ಈ ರಥೋತ್ಸವ ಕರ್ನಾಟಕ ಸರ್ಕಾರ ಮುಜರಾಯಿ ಇಲಾಖೆಯಿಂದ ನಡೆಸಿಕೊಡಲಾಗುತ್ತದೆ. ರಥವು ನಾಗೇಶ್ವರ ದೇವಾಲಯದಿಂದ ಹೊರಟು ಮಾರಮ್ಮನ ಗುಡಿಯ ಬಳಿ ನಿಲ್ಲಿಸಲಾಗುವುದು. ನಂತರ ಅಲ್ಲಿಂದ ಸಂಜೆ ಹೊತ್ತಿಗೆ ಮತ್ತೆ ನಾಗೇಶ್ವರ ದೇವಾಲಯ ಬಳಿ ಬಂದು ನಿಲ್ಲಿಸಲಾಗುವುದು. ಇಲ್ಲಿನ ಜನಪದೀಯರು ಹೇಳುವಂತೆ ಮೊದಲು ರಾಜರ ಕಾಲದಲ್ಲಿ ಮಣ್ಣಿನ ಕೋಟೆಯನ್ನು ಸುತ್ತಿ ವಾಪಾಸಾಗುತ್ತಿತ್ತು ಎಂದು ಇದು ಸತ್ಯಕ್ಕೆ ಹತ್ತಿರವಾದದ್ದು ಎಂದು ನಂಬಬಹುದು. ಕಾರಣ ಬೇಗೂರಿನಲ್ಲಿರುವ ಗಂಗರ ದೇವಾಲಯಗಳಲ್ಲಿ ಕೋಟೆಯ ಒಳಗೆ ಎರಡು ದೇವಾಲಯಗಳಿವೆ. ಒಂದು ವೇಣುಗೋಪಾಲಸ್ವಾಮಿ ದೇವಾಲಯ, ಮತ್ತೊಂದು ಕಾಶಿವಿಶ್ವೇಶ್ವರ ದೇವಾಲಯ. ಗಂಗರ ಕಾಲಕ್ಕೆ ಈ ಎರಡು ದೇವಾಲಯಗಳು ಮಹತ್ವಯುತವಾದ್ದರಿಂದ ಈ ದೇವಾಲಯಗಳವರೆಗೂ ರಥ ಬಂದಿರಬಹುದೆಂದು ಊಹಿಸಬಹುದು. ಅಂದಿನ ಕಾಲಕ್ಕೆ ಕೋಟೆ ವೈಭವಯುತವಾದದ್ದು ಎಂಬುದನ್ನು ಸ್ಮರಿಸಬಹುದು. ಜೊತೆಗೆ ಕೋಟೆಯ ಗಜಕೊಂಡದಲ್ಲಿ ನಾಗೇಶ್ವರ ದೇವಾಲಯದ ಕಂಚಿನ ರಥವನ್ನು ತಳ್ಳಲಾಗಿದೆ. ನಂತರ ಯಾವುದೇ ಕಂಚಿನ ರಥ ನಿರ್ಮಿಸದೇ ಮರದ ರಥವನ್ನೇ ಮೆರವಣಿಗೆಗೆ ಬಳಸಲಾಗುತ್ತಿದೆ ಎಂಬ ವಿಚಾರವು ಸಹ ಇದಕ್ಕೆ ಪುಷ್ಠಿಯನ್ನು ನೀಡುತ್ತದೆ. ಈ ಕಾರಣದಿಂದಲೇ ನಾನು ಪ್ರಾರಂಭದಲ್ಲಿಯೇ ಹೇಳಿದ್ದು ಆಚರಣೆಗಳು ಕಾಲದ ದವಡೆಗೆ ಸಿಕ್ಕಿ ನಿರಂತರ ಬದಲಾಗುತ್ತವೆ ಎಂದು.

ಬ್ರಹ್ಮರಥೋತ್ಸವ ಕಾರ್ಯಕ್ರಮ ಮಧ್ಯಾಹ್ನದಿಂದ ಸಂಜೆಯೊಳಗೆ ಮುಗಿದರೆ ಅಂದು ರಾತ್ರಿ ಬೇಗೂರು ಸಂಪೂರ್ಣ ಬೆಳಕಿನಿಂದ ಕಂಗೊಳಿಸುವ ನಗರವಾಗುತ್ತದೆ. ಬೇಗೂರಿನ ಸುತ್ತಮುತ್ತಲಿನ ಎಲ್ಲ ಗ್ರಾಮಸ್ಥರು ತಮ್ಮ ತಮ್ಮ ಊರಿನ ಮುಖ್ಯವಾದ ದೇವರುಗಳಿಗೆ ಪಲ್ಲಕ್ಕಿ ಉತ್ಸವವನ್ನು ನಡೆಸಿಕೊಡುತ್ತಾರೆ. ಎಲ್ಲ ಗ್ರಾಮಸ್ಥರು ಒಗ್ಗಟ್ಟಿನಿಂದ ಬೇಗೂರಿಗೆ ಪಲ್ಲಕ್ಕಿಯನ್ನು ಮೆರವಣಿಗೆಯಲ್ಲಿ ಕರೆತಂದು ಬೆಳಗಿನ ಜಾವಕ್ಕೆ ತಮ್ಮ ಊರುಗಳಿಗೆ ಹಿಂದಿರುಗುವುದು ಸಂಪ್ರದಾಯವಾಗಿದೆ. ಗ್ರಾಮಸ್ಥರೆಲ್ಲ ಪ್ರತಿಯೊಂದು ಊರಿನಿಂದ ಬರುವ ದೇವರುಗಳ ದರ್ಶನಕ್ಕೆ ಪಾತ್ರರಾಗುತ್ತಾರೆ. ಈ ಮಧ್ಯೆ ಬ್ರಾಹ್ಮಣರಿಗೆ ಅರವಂಟಿಗೆಯನ್ನು ಅಲ್ಲಲ್ಲಿ ನಡೆಸಲಾಗುತ್ತದೆ. ಹಾಗೂ ಬ್ರಾಹ್ಮಣರಿಗೆ ಹಗಲು ಅನ್ನಸಂತರ್ಪಣೆ ಹಾಗೂ ರಾತ್ರಿ ಬ್ರಾಹ್ಮಣರಿಗೆ ಉಪಹಾರದ ಸೇವೆಯನ್ನು ಗ್ರಾಮಸ್ಥರು ನಡೆಸಿ ಕೊಡುವುದನ್ನು ಸ್ಮರಿಸಬಹುದು.

ಇನ್ನು ರಥದ ಸ್ವರೂಪದ ಬಗ್ಗೆ ನೋಡಿದಾಗ ಪ್ರಾರಂಭದ ಕಾಲದಲ್ಲಿ ರಥ ತುಂಬ ಎತ್ತರಕ್ಕೆ ಕಟ್ಟಲಾಗುತ್ತಿತ್ತು. ಸೌಲಭ್ಯಾಕಾಂಕ್ಷಿಯ ದೃಷ್ಟಿಯಿಂದ ರಥವನ್ನು ಒಂದು ನಿರ್ಧಿಷ್ಟ ಎತ್ತರಕ್ಕೆ ಸೀಮಿತಗೊಳಿಸಲಾಗಿದೆ. ಮೊದಲ ಹಂತ ಮಂಟಪದ ರೀತಿಯಿದ್ದು, ದೇವರನ್ನು ಮೆರವಣಿಗೆ ಮಾಡಲು ಬೇಕಾಗುವಷ್ಟು ಸ್ಥಳ ಹೊಂದಿರುತ್ತದೆ. ರಥ ಎತ್ತರಕ್ಕೆ ಗೋಪುರದಂತೆ ನಿರ್ಮಿಸಿದ್ದು, ಸುತ್ತಲೂ

ಬಾವುಟಗಳನ್ನು ಕಟ್ಟಲಾಗಿರುತ್ತದೆ. ಬಾವುಟದಲ್ಲಿ ಆನೆ, ಕುದುರೆ, ಶಿವನ ಚಿತ್ರ ಹಾಗೂ ಲಿಂಗವನ್ನು ಮುದ್ರಿಸಲಾಗಿರುತ್ತದೆ. ಗೋಪುರದ ಕೊನೆಯಲ್ಲಿ ಸುಂದರವಾದ ಕಂಚಿನ ಕಳಸವನ್ನು ಇಟ್ಟಿರುತ್ತಾರೆ. ಭಕ್ತಾದಿಗಳು ರಥವನ್ನು ಎಳೆಯುವ ಸಂದರ್ಭದಲ್ಲಿ ಕಳಸಕ್ಕೆ ಬಾಳೆಹಣ್ಣನ್ನು ಎಸೆಯುವುದು ಜನರಿಗೆ ಮನರಂಜನೆಯನ್ನು ಸೂಚಿಸುತ್ತದೆ. ಕೆಲವರಿಗಂತೂ ಈ ಕಾರ್ಯವೇ ಒಂದು ಪಂದ್ಯವಾಗಿ ಬಿಟ್ಟಿದೆ. ರಥಕ್ಕೆ ಎರಡು ಮರದ ಚಕ್ರಗಳಿದ್ದು, ಸಂಪೂರ್ಣವಾಗಿ ರಥವನ್ನು ಮರದಿಂದ ನಿರ್ಮಿಸಲಾಗಿರುತ್ತದೆ. ಬೇಗೂರು ಸುತ್ತಮುತ್ತಲಿನ ಜಾತ್ರೆಗಳನ್ನು ಗಮನಿಸಿದಾಗ ಹುಸ್ಕೂರು, ಹುಳಿಮಾವು, ಬೆಟ್ಟದಾಸನಪುರ, ಬನ್ನೇರುಘಟ್ಟದ ಜಾತ್ರೆಗಳು ಪ್ರಮುಖವಾದ ಜಾತ್ರೆಗಳಾಗಿವೆ. ವಿಜಯನಗರ ಅರಸರ ಕಾಲದಲ್ಲಿ ಬೇಗೂರಿನ ಆಳ್ವಿಕೆಗೆ ಒಳಪಟ್ಟಿದ್ದ ಹುಸ್ಕೂರು ಸಾಂಸ್ಕೃತಿಕವಾಗಿ ವಿಶೇಷತೆಯನ್ನು ಉಳಿಸಿಕೊಂಡು ಬಂದಿದೆ. ಬೆಂಪೂರು ಪರಿಸರದಲ್ಲಿ ನಡೆಯುವ ಎಲ್ಲ ಜಾತ್ರೆಗಳಿಗಿಂತ ವಿಶೇಷವೆನಿಸುತ್ತದೆ. ಈಗಲೂ ಸಹ ರಥವನ್ನು ತುಂಬ ಎತ್ತರಕ್ಕೆ ಕಟ್ಟಿ ಹಸುಗಳಿಂದ ಎಳೆಸುವುದು ಜನರಲ್ಲಿ ರೋಚಕವನ್ನುಂಟು ಮಾಡುತ್ತದೆ. ಬೇಗೂರು ಜಾತ್ರೆಯಲ್ಲಿ ರಥವನ್ನು ಜನರು ಹಗ್ಗದ ಸಹಾಯದಿಂದ ಎಳೆಯುವುದನ್ನು ಕಾಣಬಹುದು.

ರಥೋತ್ಸವ ಮುಗಿದ ನಂತರ ಪಾರ್ವಾಟೋತ್ಸವ, ಗಜವಾಹನೋತ್ಸವ ಮತ್ತು ಧ್ವಜವರೋಹಣ, ಉಯ್ಯಾಲೋತ್ಸವ, ದ್ವಾದಶ ಪ್ರದಕ್ಷಿಣ ಮತ್ತು ರಾವಣೋತ್ಸವ, ಮಹಾಭಿಷೇಕ, ಶಯನೋತ್ಸವ, ವಿಶ್ವರೂಪದರ್ಶನ. ಈ ಆಚರಣೆಗಳೊಂದಿಗೆ ಬ್ರಹ್ಮರಥೋತ್ಸವಕ್ಕೆ ಮುಕ್ತಾಯ ಸೂಚಿಸಲಾಗುವುದು. ಜಾತ್ರೆಯ ಅಂಗವಾಗಿಯೇ ಪಲ್ಲಕ್ಕಿ ಉತ್ಸವವನ್ನು ಅಂದು ರಾತ್ರಿ ಆಚರಿಸುವುದು ವಿಶೇಷವಾಗಿ ಕಾಣಬಹುದು. ಅನೇಕಲ್ ಹಾಗೂ ಬೇಗೂರು ಪರಿಸರದಲ್ಲಿ ನಡೆಯುವ ಬಹುತೇಕ ಜಾತ್ರೆಗಳ ಜೊತೆ-ಜೊತೆಗೆ ಪಲ್ಲಕ್ಕಿಗಳ ಉತ್ಸವವನ್ನು ಆಚರಿಸುವುದು ಸಾಮಾನ್ಯ. ಬೆಂಪೂರು-೧೨ ಭಾಗಕ್ಕೆ ಒಳಪಟ್ಟ 'ಎಜ್ಕಿಂಟೆ'ಯಲ್ಲಿ ಮಾತ್ರ ಬೃಹತ್ ಸಂಖ್ಯೆಯ ಪಲ್ಲಕ್ಕಿ ಉತ್ಸವ ಮಾತ್ರ ಆಚರಿಸುತ್ತಾರೆ. ಹುಸ್ಕೂರು ಜಾತ್ರೆಯಲ್ಲಿ ಬೇಗೂರಿನಂತೆ ರಥ ಹಾಗೂ ಪಲ್ಲಕ್ಕಿ ಉತ್ಸವಗಳು ನಡೆಯುತ್ತವೆ. ಈ ಉತ್ಸವದಲ್ಲಿ ಹೆಚ್ಚಾಗಿ ಚರ್ಮವಾದ್ಯಗಳನ್ನು ಬಳಸುವುದು ಸಾಮಾನ್ಯ ಹಾಗೂ ಜಾನಪದ ಕುಣಿತಗಳಾದ ಡೊಳ್ಳುಕುಣಿತ, ಜಾನಪದ ಕುಣಿತ. ತಮಿಳುನಾಡು ಮೂಲದ ಕರಗ ಕುಣಿತ, ಮುಂತಾದ ಕಾರ್ಯಕ್ರಮಗಳು ನಡೆಯುತ್ತವೆ. ಇಲ್ಲಿ ಭಾಗವಹಿಸುವ ಪಲ್ಲಕ್ಕಿಗಳು, ಹೂವಿನಪಲ್ಲಕ್ಕಿ, ಮುತ್ತಿನ ಪಲ್ಲಕ್ಕಿಗಳು ವಿಶೇಷವೆನಿಸುತ್ತವೆ.

ಬೇಗೂರು ಜಾತ್ರೆ ನಿರಂತರ ಪ್ರಯೋಗಕ್ಕೆ ಒಳಪಡುತ್ತ ಬಂದಿದ್ದು ಇತ್ತೀಚೆಗೆ ಕರಗ ಉತ್ಸವವನ್ನು ಸಹ ಜಾತ್ರೆಯ ಜೊತೆಗೆ ಮಾಡಲಾಗುತ್ತದೆ. ಸಂಪ್ರದಾಯದಂತೆ ಇಲ್ಲಿ ಮೊದಲಿನಿಂದ ಕರಗ ಉತ್ಸವ ಇರಲಿಲ್ಲ. ಇತ್ತೀಚೆಗೆ ಒಂದು ಬೆಳವಣಿಗೆಯಾಗಿದೆ. ಒಟ್ಟಾರೆಯಾಗಿ ಬೇಗೂರಿನ ಬ್ರಹ್ಮರಥೋತ್ಸವದ ವಿಶೇಷತೆಗಳನ್ನು ಗಮನಿಸಿದಾಗ ಈ ಉತ್ಸವ ಸಂಪೂರ್ಣವಾಗಿ ಬೆಂಪೂರು-೧೨ರ ಗ್ರಾಮಸ್ಥರ

ಕೊಡುಗೆಯಾಗಿದ್ದು ಪ್ರತಿಯೊಂದು ಕಾರ್ಯಕ್ರಮಕ್ಕೂ ದಾನಿಗಳ ಕೊಡುಗೆ ಇದ್ದೇ ಇರುತ್ತದೆ. ಈ ಉತ್ಸವದಲ್ಲಿ ಮುಂದೆ ಚರ್ಮವಾದ್ಯಗಳನ್ನು ಬಾರಿಸುವ ತಂಡವಿದ್ದು ಅದು 'ತೊವಗೂರಿನ'(ತೋಗೂರು). ಒಂದು ಕುಟುಂಬದಿಂದ ನೆರವೇರಿಸಿಕೊಡಲಾಗುವುದು. ಇವರು ಬ್ರಹ್ಮರಥೋತ್ಸವಕ್ಕೆ ಬಿಟ್ಟರೆ ಬೇರೆ ಎಲ್ಲೂ ಸಹ ವಾದ್ಯಗಳನ್ನು ಬಾರಿಸುವುದಿಲ್ಲ. ಹಾಗೂ ಯಾವುದೇ ಧನಾಪೇಕ್ಷೆಯನ್ನು ಬಯಸುವುದಿಲ್ಲ. ನಿಷ್ಠೆಯಿಂದ ಪ್ರತಿವರ್ಷ ಜಾತ್ರೆಗೆ ಕಳೆಕಟ್ಟಿ ಕೊಡುವ ಕೆಲಸ ಮಾಡುತ್ತಾರೆ. ಈ ರೀತಿ ಪ್ರತಿಯೊಂದು ಕಾರ್ಯವನ್ನು ಸಹ ಇದು ನಮ್ಮ ಕರ್ತವ್ಯ ಎಂಬ ಭಾವನೆಯೊಂದಿಗೆ ಏಕಮನಸ್ಕರಾಗಿ ವಿಜೃಂಭಣೆಯಿಂದ ಉತ್ಸವ ನಡೆಸಿಕೊಡುವುದನ್ನು ಕಾಣುತ್ತೇವೆ.

ಈ ಜಾತ್ರೆಯ ಮತ್ತೊಂದು ವಿಶೇಷತೆ ಎಂದರೆ ಪಾರ್ವತಿ ಸಮೇತನಾದ ಶಿವನನ್ನು ಮೆರವಣಿಗೆಯಲ್ಲಿ ಚಿಕ್ಕಬೇಗೂರಿಗೆ ಕರೆತರಲಾಗುವುದು ಕಾರಣ ಇಂದಿನ ಚಿಕ್ಕಬೇಗೂರು ಇತ್ತೀಚಿಗಷ್ಟೇ ನಿರ್ಮಿಸಿಕೊಂಡಿರುವ ಊರು. ಇಲ್ಲಿನ ಪೂರ್ವಿಕರೆಲ್ಲ, ಮೊದಲು ಬೇಗೂರಿನಲ್ಲಿಯೇ ಇದ್ದಂತವರು. ಬೇಗೂರು ಕೆರೆ ತುಂಬಿ ಕೋಡಿ ಹೋದ ಸಂದರ್ಭದಲ್ಲಿ ಕೋಡಿಯ ದಡಕ್ಕೆ ಇದ್ದ ಭೂಮಿಯನ್ನು ಕೃಷಿಗೆ ಅಳವಡಿಸಲಾಗುತ್ತಿರಲಿಲ್ಲ. ಇದರ ಪರಿಣಾಮ ಒಂದು ಊರು ನಿರ್ಮಿತವಾಯಿತು. ಚಿಕ್ಕಬೇಗೂರು ಊರಿಗೆ ಸುಮಾರು ಒಂದು ಅಥವಾ ಎರಡು ಶತಮಾನಗಳಷ್ಟು ಇತಿಹಾಸವಷ್ಟೇ ಇದೆ. ಚಿಕ್ಕಬೇಗೂರು ಪ್ರದೇಶವನ್ನೇಲ್ಲ ಮೊದಲು ಬೇಗೂರು ಎಂದೇ ಕರೆಯುತ್ತಿದ್ದರು. ಬೇಗೂರು ಕೃಷಿ ಭೂಮಿ ಬಹು ವಿಸ್ತಾರವಾಗಿದ್ದು ಇಂದಿನ ಮಡಿವಾಳ, ಬೊಮ್ಮನಹಳ್ಳಿ, ಸಿಂಗಸಂದ್ರವರೆಗೆ ವಿಸ್ತರಿಸಿತ್ತು. ಆದರೆ ಬೇಗೂರಿನ ಕೆರೆ ತುಂಬಿ ಕೋಡಿ ಹೊಡೆದರೆ ಜನರು ಕೃಷಿಗೆ ತಮ್ಮ ಭೂಮಿಗಳ ಕಡೆ ಹೋಗಲು ಸಾಧ್ಯವಾಗುತ್ತಿರಲಿಲ್ಲ. ಆದ್ದರಿಂದ ಪರ್ಯಾಯವೆಂಬಂತೆ ಬೇಗೂರಿನಿಂದ ಬಂದ ಒಂದು ಗುಂಪು ಕೆರೆಕೋಡಿ ಹೋಗುವ ಕಡೆ ಒಂದು ದಿಣ್ಣೆಯಲ್ಲಿ ಬಂದು ವ್ಯವಸಾಯವನ್ನು ಯಾವುದೇ ತಡೆ ಇಲ್ಲದೆ ಮಾಡಲಾರಂಭಿಸಿದರು. ಆದ್ದರಿಂದ ಅಲ್ಲಿರುವವರು ಬಹುಪಾಲು ಬೇಗೂರಿನ ವಂಶಸ್ಥರಾದ್ದರಿಂದ ಆ ಊರಿಗೆ ಚಿಕ್ಕಬೇಗೂರು ಎಂದು ಬೇಗೂರಿಗೆ ದೊಡ್ಡಬೇಗೂರು ಎಂದು ಕರೆಯುವುದು ಜನರಿಗೆ ವಾಡಿಕೆಯಾಯಿತು. ಬೇಗೂರಿನ ಉತ್ಸವ ಬಂದಾಗ ಅದು ಚಿಕ್ಕಬೇಗೂರು ಉತ್ಸವವೇ ಎಂಬಂತೆ ಜನರು ಈಗಲೂ ಭಾವಿಸುತ್ತಾರೆ. ಆ ಕಾರಣದಿಂದ ಚಿಕ್ಕಬೇಗೂರಿನಲ್ಲಿರುವ ಜನರಿಗೆ ನಾಗೇಶ್ವರ ದೇವರ ವಿಶೇಷ ದರ್ಶನಕ್ಕಾಗಿ ಜಾತ್ರೆ ಮುಗಿದ ಮರುದಿನ ಮೆರವಣಿಗೆ ಮಾಡಿ ಬೇಗೂರಿಗೆ ಹಿಂತಿರುಗುವುದು ಸಂಪ್ರದಾಯವಾಗಿ ಮುಂದುವರೆದುಕೊಂಡು ಬಂದಿದೆ.

ಈ ಜಾತ್ರೆಯ ವಿಶೇಷದ ಜೊತೆಗೆ ಬೇಗೂರಿನ ಕೆರೆ ತುಂಬಿದ ಸಂವತ್ಸರದಲ್ಲಿ ತೆಪ್ಪೋತ್ಸವವನ್ನು ಮಾಡುತ್ತಿದ್ದರು. ಆದರೆ ಇದು ಸಂಪ್ರದಾಯವೆಂಬಂತೆ ಮುಂದುವರೆದುಕೊಂಡು ಬಂದಿಲ್ಲ. ಕೆಲವು ವರ್ಷಗಳಲ್ಲಿ ಗ್ರಾಮಸ್ಥರ ಸಹಾಯದಿಂದ ವಿಜೃಂಭಣೆಯಿಂದ ನಾಗೇಶ್ವರಸ್ವಾಮಿ

ದೇವರನ್ನು ತೆಪ್ಪದಲ್ಲಿ ಇಟ್ಟು ಕೆರೆಯನ್ನು ಸುತ್ತಲಾಗುತ್ತಿತ್ತು. ಆದರೆ ಕಾಲಾನಂತರದಲ್ಲಿ ಆ ಆಚರಣೆಯನ್ನು ನಿಲ್ಲಿಸಲಾಯಿತು. ದಾನಿಗಳ ಅಭಾವದಿಂದಲೋ ಅಥವಾ ಕೆರೆ ಯಾವಾಗಲೂ ತುಂಬಿರುವುದಿಲ್ಲ ಎಂಬ ಕಾರಣದಿಂದಲೋ ಇರಬಹುದು. ಆದರೆ ಈ ತೆಪ್ಪೋತ್ಸವವನ್ನೇ ವಿಶೇಷ ಕಾರ್ಯಕ್ರಮವಾಗಿ ಮಾಡಿರುವುದು ಉಂಟು. ಇಂದು ಈ ಆಚರಣೆ ಸದ್ಯಕ್ಕೆ ನಡೆಯುತ್ತಿಲ್ಲ. ಒಟ್ಟಾರೆ ಸಾಂಸ್ಕೃತಿಕವಾಗಿ ಜನರ ಧಾರ್ಮಿಕ ವಿಧಿವಿಧಾನಗಳನ್ನು ಗಮನಿಸಿದಾಗ ಬೇಗೂರು ನಾಗೇಶ್ವರ ದೇವಾಲಯದ ಬ್ರಹ್ಮರಥೋತ್ಸವ ವಿಶೇಷವಾದ ಆಚರಣೆಯಾಗಿ ಮುಂದುವರೆದುಕೊಂಡು ಬಂದು ಕಾಲ ಕಾಲಕ್ಕೆ ತಕ್ಕಂತೆ, ಅಭಿರುಚಿಗೆ ತಕ್ಕಂತೆ ಬದಲಾಗುತ್ತ ತನ್ನ ಸ್ವರೂಪವನ್ನು ಪರಿವರ್ತಿಸಿಕೊಳ್ಳುತ್ತ ಬಂದರೂ ಜಾತ್ರೆ ಉತ್ಸವ ಮಹತ್ವಯುತವಾಗಿದೆ.

**ಊರಹಬ್ಬ :-**

ಬೇಗೂರು ಹಾಗೂ ಚಿಕ್ಕಬೇಗೂರು ಗ್ರಾಮಸ್ಥರು ಒಟ್ಟಾಗಿ ಸೇರಿ ಆಚರಿಸುವ ಹಬ್ಬಗಳಲ್ಲಿ ಇದು ಕೂಡ ಒಂದು. ಇದು ಬೆಂಪೂರು-೧೨ರ ಭಾಗಕ್ಕೆ ವಿಸ್ತರಿಸಿಲ್ಲ. ಒಂದು ನಿರ್ಧಿಷ್ಟ ದಿನಾಂಕದಂದು ಎರಡು ಊರಿನ ಹಿರಿಯರು, ಗ್ರಾಮಸ್ಥರು ಸೇರಿ ಈ ಹಬ್ಬದ ರೂಪರೇಶೆಗಳನ್ನು ಸಿದ್ಧಗೊಳಿಸಿಕೊಳ್ಳುತ್ತಾರೆ. ನಂತರ ಸಂಪ್ರದಾಯದಂತೆ ಟಮಟೆ ವಾದ್ಯದ ಮೂಲಕ ಗ್ರಾಮಸ್ಥರಿಗೆ ವಿಷಯವನ್ನು ಸಾರಿ ಹೇಳುವುದು ಪದ್ಧತಿ ಇನ್ನೂ ಕಾಣಬಹುದು. ಎರಡೂ ಗ್ರಾಮಸ್ಥರು ಸೇರಿ ಮೊದಲ ದಿನ ಬೇಗೂರಿನ ನಾಗೇಶ್ವರ ದೇವಾಲಯದ ಪಕ್ಕದಲ್ಲಿಯೇ ಇರುವ ನಂದಿಶ್ವರನಿಗೆ ಬೆಲ್ಲದ ಆರತಿಯನ್ನು ಮಾಡುವುದರ ಮೂಲಕ ಚಾಲನೆ ನೀಡಲಾಗುತ್ತದೆ. ಪ್ರತಿಯೊಂದು ಕುಟುಂಬದ ಸದಸ್ಯರು ಪಾಲ್ಗೊಂಡು ಈ ಕಾರ್ಯವನ್ನು ನೆರವೇರಿಸುತ್ತಾರೆ. ಇದಾದ ನಂತರ ಗ್ರಾಮದ ಪ್ರತಿಯೊಂದು ದೇವರಿಗೂ ಪೂಜೆ ಸಲ್ಲಿಸುವ ಮೂಲಕ ತಂಬಿಟ್ಟನ್ನು ಅರ್ಪಿಸುತ್ತಾರೆ. ಹಾಗೂ ಊರಬ್ಬದ ಮತ್ತೊಂದು ವಿಶೇಷವೆಂದರೆ ಇಲ್ಲಿ ಶೈವರು, ಬ್ರಾಹ್ಮಣರು, ಸಾದರು ಮುಂತಾದ ಕೆಲವು ಕುಟುಂಬಗಲನ್ನು ಬಿಟ್ಟು ಎಲ್ಲಾ ಜನರು ಮಾಂಸಾಹಾರವನ್ನು ಸೇವಿಸುತ್ತಾರೆ. ಆದ್ದರಿಂದ ಅಂದು ಊರಿನ ಪ್ರತಿ ಗ್ರಾಮ ದೇವತೆಗಳಿಗೆ ಕುರಿ, ಕೋಳಿಗಳನ್ನು ಬಲಿ ಕೊಡಲಾಗುತ್ತದೆ.

ಈ ಊರಬ್ಬವನ್ನು ಬೇಗೂರಿನಲ್ಲಿರುವ ಗಂಗರ ಕಾಲದ ಸಪ್ತಮಾತೃಕೆಯರ ದೇವಾಲಯವಾದ ಚೌಡೇಶ್ವರಿ ದೇವಾಲಯಕ್ಕೆ ಪೂಜೆ ಸಲ್ಲಿಸುವುದರ ಮೂಲಕ ಮುಕ್ತಾಯ ಮಾಡುತ್ತಾರೆ. ಚೌಡೇಶ್ವರಿ ದೇವಾಲಯಕ್ಕೆ ಸಲ್ಲಿಸುವ ಪೂಜೆ ವಿಶೇಷವೆನಿಸುತ್ತದೆ. ಕಾರಣ ಸಂಜೆಯ ಹೊತ್ತಿಗೆ ಈ ದೇವಾಲಯದ ಎದುರು ಬೆಂಕಿಯ ಹೊಂಡವನ್ನು ಹಾಕಲಾಗುವುದು. ಎಲ್ಲಾ ಭಕ್ತಾದಿಗಳು ಬೆಂಕಿಯ ಹೊಂಡವನ್ನು ದಾಟಿ ದೇವರ ದರ್ಶನ ಪಡೆಯುತ್ತಾರೆ. ಆದರೆ ಸಂಪೂರ್ಣ ಕಡ್ಡಾಯವಲ್ಲ. ಕೆಲವರು ವಿಶೇಷ ಹರಕೆ ಇರುವವರು ಕಡ್ಡಾಯವಾಗಿ ದಾಟುತ್ತಾರೆ. ಕೆಲವರು ಭಯದಿಂದಲೋ ಅಥವಾ

ಅವೈಜ್ಞಾನಿಕ ಕಾರಣವನ್ನು ಕೊಟ್ಟು ನೇರವಾಗಿ ದೇವರ ದರ್ಶನ ಪಡೆಯುತ್ತಾರೆ. ಇಂದು ಈ ದೇವಾಲಯ ಸಂಪೂರ್ಣ ಜೀರ್ಣೋದ್ಧಾರಗೊಂಡು ಸುವ್ಯವಸ್ಥಿತ ಸ್ಥಿತಿಯಲ್ಲಿದೆ. ಈ ಎರಡೂ ಆಚರಣೆಗಳು ಇಂದಿಗೂ ಸಹ ಬೇಗೂರು ಹಾಗೂ ಚಿಕ್ಕಬೇಗೂರು ಗ್ರಾಮಸ್ಥರಿಗೆ ವಿಶೇಷವಾಗಿಯೇ ಇದೆ. ಎರಡು ಗ್ರಾಮಸ್ಥರಿಗೂ ಇವು ಸಂಭ್ರಮದ ಆಚರಣೆಗಳಾಗಿ ಉಳಿದಿದೆ.

## ಹುಸ್ಕೂರು ಜಾತ್ರೆಯ ಕಿರು ಪರಿಚಯ

ಹುಸ್ಕೂರು ಗ್ರಾಮ ವಿಜಯನಗರ ಅರಸರ ಕಾಲದಲ್ಲಿ ಬೇಗೂರು ಕ್ಷೇತ್ರದ ಆಳ್ವಿಕೆಗೆ ಒಳಪಟ್ಟ ಪ್ರದೇಶ ಆನಕೇಲ್ ತಾಲ್ಲೂಕು ಭಾಗಕ್ಕೆ ಸೇರುವ ಇದು ಬೆಂಗಳೂರಿನಿಂದ ೩೦ ಕಿ.ಮೀ.ದೂರದಲ್ಲಿದೆ. ವರ್ಷಕ್ಕೊಮ್ಮೆ ನಡೆಯುವ 'ಮದ್ದೂರಮ್ಮ ಜಾತ್ರೆ' ಕರ್ನಾಟಕದ ಪ್ರಮುಖ ಜಾತ್ರೆಗಲ್ಲಿ ಒಂದು. ಐತಿಹಾಸಿಕವಾಗಿ ಬೇಗೂರು ಪ್ರಾಚೀನತೆಯನ್ನು ಪಡೆದುಕೊಂಡಿದ್ದು ಸಾಂಸ್ಕೃತಿಕವಾಗಿ ಬೇಗೂರು ಹಾಗೂ ಹುಸ್ಕೂರು ಜಾತ್ರೆಗಳ ನಡುವೆ ಆಚರಣೆಗಳಲ್ಲಿ, ಸಂಪ್ರದಾಯಗಳಲ್ಲಿ ಸ್ವಾಮ್ಯತೆಯನ್ನು ಕಾಣಬಹುದು. ಹುಸ್ಕೂರು ಜಾತ್ರೆ ಶಿವರಾತ್ರಿಯ ಜಾಗರಣೆ ಮುಗಿದು ೨೦ ದಿನಕ್ಕೆ ಸರಿಯಾಗಿ ಜಾತ್ರೆ ಆರಂಭಗೊಂಡು ಸತತವಾಗಿ ೫ ದಿನಗಳ ಕಾಲ ನಡೆಯುತ್ತದೆ. ವಿವಿಧ ಸಂಪ್ರದಾಯ, ಆಚರಣೆಗಳಿಂದ ಜನರು ಸಂತೋಷವನ್ನು, ಹುಮ್ಮಸ್ಸನ್ನು ಇಮ್ಮಡಿಗೊಳಿಸುವ ಜಾತ್ರೆಯೇ ಹುಸ್ಕೂರು ಜಾತ್ರೆ.

ಶಿವರಾತ್ರಿ ಮುಗಿದ ಮೇಲೆ ಬರುವ ಶುಕ್ರವಾರ ಊರಿನ ಎಲ್ಲ ದೇವರುಗಳನ್ನು ತೊಳೆದು ಶೃಂಗಾರ ಮಾಡಿ ಸಂಜೆಯಿಂದ ರಾತ್ರಿ ಸರಿಸುಮಾರು ಹೊತ್ತಿನವರೆಗೂ ಬೀದಿ ಬೀದಿಗಳಲ್ಲಿ ಮೆರವಣಿಗೆ ಮಾಡಿ, ಪೂಜೆ ಸಲ್ಲಿಸಿ ಕೊನೆಗೆ ದೇವರುಗಳನ್ನು ದೇವಸ್ಥಾನದಲ್ಲಿರಿಸಿದ ಮೇಲೆ ಪ್ರಾರಂಭವಾಗುವುದೇ ಸಾರಣೆ(ಸಾಟು). ಊರಿನಲ್ಲಿ ನಡೆಯುವಂತಹ ವಿಶೇಷ ಹಾಗೂ ಇನ್ನಾವುದೇ ಕಾರ್ಯ ಇರಬಹುದು. ಊರಿನ ಎಲ್ಲರಿಗೂ ತಿಳಿಯಲಿ ಮತ್ತು ತಿಳಿದಿರಲಿ ಎಂಬ ಕಾರಣದಿಂದ ಹಾಗೂ ಅವರೆಲ್ಲರ ಸಹಾಯ, ಸಹಕಾರ ಬೇಕು ಎನ್ನುವ ಕಾರಣದಿಂದ ವಿಷಯವನ್ನು ಬೀದಿ-ಬೀದಿಗಳಲ್ಲಿ, ಸಾರಿ ಸಾರಿ ಹೇಳುವ ಪದ್ಧತಿಯನ್ನು ನಮ್ಮ ಜಾನಪದರು ಕಂಡುಕೊಂಡ ದಾರಿಯೇ ಸಾರಣೆ. ಇದು ಬೇಗೂರು ಒಳಗೊಂಡಂತೆ ಆನೇಕಲ್ ಭಾಗದ ಎಲ್ಲಾ ಕಡೆ ಇನ್ನೂ ಪ್ರಚಲಿತದಲ್ಲಿರುವುದು ಕಾಣಬಹುದು. ಹುಸ್ಕೂರು ಜಾತ್ರೆಯ ವಿಷಯವನ್ನು ಸಾರುವವರು "ಮದ್ದೂರಮ್ಮನ ಜಾತ್ರೆ, ಮುತ್ಯಾಲಮ್ಮನ ಜಾತ್ರೆ, ಕಾವೇರಮ್ಮನ ಜಾತ್ರೆ, ಪಿಳೆಕಮ್ಮನ ಜಾತ್ರೆ, ಕೊಂಕಮಾಸುರರೆಲ್ಲಾ ಪಕ್ಕಕ್ಕೆ ಹೋಗ್ರಮ್ಮೊ" ಎಂಬ ಮಾತುಗಳನ್ನು ಕೂಗುತ್ತಾ ಬೀದಿ-ಬೀದಿ ದೇವಸ್ಥಾನಗಳನ್ನೆಲ್ಲ ಸುತ್ತಿ ಬರುತ್ತಾರೆ. ಇದನ್ನು ಸಾರುವವರೇ ಒಂದು ಪಂಗಡ. ಇವರನ್ನು ಸ್ಥಳೀಯವಾಗಿ 'ಮಗದೊವರು' ಎನ್ನುತ್ತಾರೆ. ಇವರ ಜೊತೆಯಲ್ಲಿ ಹಿಂದೆಯೇ ತೋಟಿ, ತಳವಾರನೂ ಸಹ ಭಾಗಿಯಾಗಿರುತ್ತಾರೆ. ಇವರು ದೊಣ್ಣೆ ಮತ್ತು ದೀಪವನ್ನು ಹಿಡಿದುಕೊಂಡು ಸಾರುವವರ ಹಿಂದೆ

ಸಾಗಬೇಕು. ಸಾರುವವರ ಮೈ ಮೇಲೆ ದೇವರು ಬಂದಿರುತ್ತಾರೆ ಎಂಬ ನಂಬಿಕೆ ಇದೆ. ಮತ್ತೆ ಆ ವ್ಯಕ್ತಿ ಅಂದಿನಿಂದ ಜಾತ್ರೆ ಮುಗಿಯುವವರೆಗೂ ಸಹ ತನ್ನ ಮನೆಗೆ ಹೋಗುವಂತಿಲ್ಲ. ಹಾಗೆಯೇ ಮನೆಯ ಊಟವನ್ನು ಮಾಡುವಂತಿಲ್ಲ. ಆ ಊರಿನ ಉನ್ನತ ವರ್ಗದ ಮನೆಯವರು ಒಂದೊಂದು ದಿನ ಒಬ್ಬೊಬ್ಬರು ಊಟವನ್ನು ನೀಡುತ್ತಾರೆ. ಅವನಿಗೆ ಮಲಗುವ ಜಾಗ ದೇವಸ್ಥಾನವೇ. ಅಲ್ಲಿಯೇ ಜಾತ್ರೆ ಮುಗಿಯುವವರೆಗೂ ಇರಬೇಕಾಗುತ್ತದೆ. ಹೀಗೆ ಪ್ರತಿ ಶುಕ್ರವಾರ ಅಂದರೆ ೩ ವಾರಗಳು ನಡೆಯುತ್ತದೆ. ಜಾತ್ರೆಯ ಶುಕ್ರವಾರ ಸಾರಣೆ ಇರುವುದಿಲ್ಲ. ಆದರೆ ಅಂದಿನಿಂದ ವಿಶೇಷತೆಗಳು ವಿವಿಧ ರೀತಿಯ ಆಚರಣೆಗಳು ಪ್ರಾರಂಭವಾಗುತ್ತದೆ.

ಜಾತ್ರೆಯ ದಿನ ಶುಕ್ರವಾರ ದೇವರ ಮೆರವಣಿಗೆ ಎಂದಿನಂತೆ ನಡೆಯುತ್ತದೆ. ಜೊತೆಗೆ ಅಂದು ಊರಿನ ಪ್ರತಿಯೊಂದು ದೇವರುಗಳನ್ನು ಮದ್ದೂರಮ್ಮ ದೇವಿಯ ಜೊತೆಯಲ್ಲಿಯೇ ತೆಗೆದುಕೊಂಡು ಹೋಗುತ್ತಾರೆ. ಅಂದು ರಾತ್ರಿ ಊರಿನ ಹೊರಭಾಗದಲ್ಲಿರುವ ನೀರಿನ ಪ್ರದೇಶಕ್ಕೆ ಹೋಗಿ ದೇವರಿಗೆ ಸ್ನಾನ ಮಾಡಿಸಿಕೊಂಡು ಬರಲಾಗುತ್ತದೆ. ಅಂದರೆ ಇಷ್ಟು ದಿನಗಳ ಕಾಲ ದೇವತೆಗಳಿಗೆ ಮೈಲಿಗೆಯಾಗಿರುತ್ತದೆ. ಅದಕ್ಕೆ ಅಂದು ನೀರಿನ ಹತ್ತಿರ ಬ್ರಾಹ್ಮಣರಿಂದ ಪೂಜೆ ಮಾಡಿಸಿ ಶುದ್ಧಿಗೊಂಡ ದೇವತೆಗಳು ದೇವಸ್ಥಾನವನ್ನು ಪ್ರವೇಶಿಸುತ್ತವೆ.

ಈ ಆಚರಣೆಯನ್ನು 'ಜಲ್ದಗಿ' ಎಂದು ಕರೆಯುತ್ತಾರೆ. ಇದೊಂದು ಶುದ್ಧೀಕರಣದ ಪ್ರಕ್ರಿಯೆಯಾಗಿದೆ. ದೇವಿಯ ಹಿಂದೆ ಹಿಂಬಾಲಿಸುವ ಮನೆ ದೇವತೆಗಳಾದ ಎಲ್ಲಮ್ಮ ದೇವರನ್ನು ಹೊತ್ತ ಭಕ್ತಾದಿಗಳು 'ಯಕ್ಕಲೀದೇ ಜೋಗಿ, ಜೊಗಕ್ಕಲದೇ ಜೋಗಿ ಜೋಗ....' ಎಂಬ ಜಾನಪದ ಹಾಡನ್ನು ಹಾಡುವುದರ ಜೊತೆಯಲ್ಲಿ ಸಾಗುತ್ತಾರೆ. ಮತ್ತೆ ಅಂದೇ ಊರಿನಲ್ಲಿ ಶ್ರೀಮದ್ದೂರಮ್ಮ ದೇವಿಗೆ 'ದೀಪೋತ್ಸವ' ಇರುತ್ತದೆ.

ಈ ದೀಪೋತ್ಸವ ಆಚರಣೆಯನ್ನು ಒಂದೊಂದು ಜನಾಂಗ ಒಂದೊಂದು ರೀತಿಯಲ್ಲಿ ಆಚರಣೆ ಮಾಡುತ್ತಾರೆ. ಊರಿನ ಉನ್ನತವರ್ಗದ ಬೆಸ್ತರು, ಲಿಂಗಾಯಿತರು, ಗೌಡರು, ಬ್ರಾಹ್ಮಣರು, ತಂಬಿಟ್ಟು ಮಾಡಿ ಮನೆಯಲ್ಲಿಯೇ ದೇವರಿಗೆ ಆರತಿಯನ್ನೆತ್ತಿ ಪೂಜೆ ಮಾಡಿಕೊಳ್ಳುತ್ತಾರೆ. ಇವರು ದೇವಸ್ಥಾನಕ್ಕೆ ಬಂದು ಪೂಜೆ ಮಾಡುವುದಿಲ್ಲ. ಅದರಲ್ಲಿರುವ ಒಂದು ವರ್ಗವಾದ ತಿಗಳರು ದೀಪಗಳನ್ನು ಮಾಡಿ ರಾತ್ರಿ ಸುಮಾರು ೧ ಗಂಟೆಯ ವೇಳೆಗೆ ದೇವಸ್ಥಾನಕ್ಕೆ ಬಂದು ದೀಪ ಬೆಳಗಿಕೊಂಡು ಹೋಗುತ್ತಾರೆ. ಆದರೆ ಇದಕ್ಕೆಲ್ಲಾ ಬಹಳ ವಿಶೇಷವಾಗಿ ಆಕರ್ಷಣೀಯವಾಗಿ ದೀಪ ಬೆಳಗುವುದು ಆ ಊರಿನ ದಲಿತಜನಾಂಗದವರು. ದೀಪ ಹೊತ್ತ ಗ್ರಾಮಸ್ಥರು ಮೆರವಣಿಗೆ ಮುಗಿಸಿಕೊಂಡು ದೇವಸ್ಥಾನದ ಒಳಗೆ ಬರುವ ವೇಳೆಗೆ ಆ ಊರಿನ ತಳವಾರ ಜನಾಂಗದ ವ್ಯಕ್ತಿಗಳು ಹಳ್ಳ ತೋಡಿ, ಅದರಲ್ಲಿ ಸೌದೆಯನ್ನು ಹಾಕಿ ಬೆಂಕಿ ಹಚ್ಚಿ ದೇವಸ್ಥಾನ ಮುಂದೆ ಕಾಯುತ್ತಿರುತ್ತಾರೆ. ಈ ಕೊಂಡ ಹಾಯುವ

ದೃಶ್ಯವನ್ನು ನೋಡಲು ಸಾವಿರಾರು ಸಂಖ್ಯೆಯಲ್ಲಿ ಜನ ಸೇರಿರುತ್ತಾರೆ. ಮೊದಲು ಆ ಕೊಂಡಕ್ಕೆ ಪೂಜೆ ಮಾಡಿ, ಸಿಡಿವೀರಣ್ಣವೊತ್ತ ವ್ಯಕ್ತಿಗೆ ದೇವರು ಮೈಮೇಲೆ ಬಂದಿರುತ್ತದೆ. ಆತ ಮೊದಲು ಕೊಂಡದಲ್ಲಿ ಕುಣಿಯುತ್ತಾ ದೇವಸ್ಥಾನವನ್ನು ಪ್ರವೇಶಿಸುತ್ತಾರೆ. ಅನಂತರ ಎಲ್ಲಾ ಭಕ್ತಾದಿಗಳು ಬೆಂಕಿ ತುಳಿದುಕೊಂಡು ದೇವಸ್ಥಾನ ಪ್ರವೇಶಿಸಿ ದೇವಿಗೆ ದೀಪ ಬೆಳಗಿ ಬರುತ್ತಾರೆ. ಅನಂತರ ಅಲ್ಲಿರುವ ಜನರು ಬಹಳ ಉತ್ಸಾಹಕರಾಗಿ ಕೊಂಡ ತುಳಿಯುತ್ತಾರೆ. ಕೊಂಡ ತುಳಿಯುವವರಿಗೆ ಯಾವುದೇ ನೋವು ಆಗುವುದಿಲ್ಲ. ಹೂವಿನ ಮೇಲೆ ನಡೆದಾಗೆ ಇರುತ್ತದೆ. ದೇವಿಯ ಮೇಲೆ ಯಾರಿಗೆ ಭಕ್ತಿ ಇರುವುದಿಲ್ಲವೋ ಅವರಿಗೆ ಸುಡುತ್ತದೆ ಎಂಬ ಮಾತುಗಳಿವೆ.

ದೀಪೋತ್ಸವ ಮುಗಿದ ಮೇಲೆ ದಲಿತ ಜನಾಂಗದ ಕೇರಿಗಳಲ್ಲಿ, ದೇವಿಗೆ 'ಬಾಯಿಬೀಗ'ದ ಆಚರಣೆಯನ್ನು ಮಾಡುತ್ತಾರೆ. ತಾವು ಹರಿಕೆ ಹೊತ್ತು ತನ್ನ ಮಕ್ಕಳಿಗೆ ಅಥವಾ ಯಾರ ಮೇಲೆ ಹರಿಕೆ ಹೊತ್ತ ವ್ಯಕ್ತಿಗೆ ದೇವಿ ಪ್ರವೇಶವಾಗುತ್ತದೆ. ಆಗ ಪೂಜಾರಿ ಬಾಯಿ ತೆಗೆದು ಎರಡು ಕೆನ್ನೆಗಳಿಗೆ ಚುಚ್ಚಿ ಒಂದು ರೀತಿಯ ಬೀಗ ಹಾಕುತ್ತಾರೆ. ಆಗಲೇ ದೇವಿಗೆ ಕುರಿ–ಮೇಕೆ, ಕೋಣವನ್ನು ಬಲಿ ನೀಡುತ್ತಾರೆ.

ಅಂದು ಸಂಜೆ ಸುತ್ತ ಮುತ್ತಲಿನ ಗ್ರಾಮಗಳಿಂದ ಹುಸ್ಕೂರು ಗ್ರಾಮಕ್ಕೆ ಶ್ರೀಮದ್ದೂರಮ್ಮ ದೇವಸ್ಥಾನದ ಬಳಿಗೆ ತೇರುಗಳ ಆಗಮನವಾಗುತ್ತದೆ. ಈ ತೇರುಗಳನ್ನು ನೋಡುವುದಕ್ಕೆ ಸುತ್ತಮುತ್ತಲಿನ ಗ್ರಾಮಸ್ಥರೆಲ್ಲರೂ, ನಗರ ಪ್ರದೇಶಗಳಿಂದಲೂ, ದೂರದ ಊರುಗಳಿಂದಲೂ ಸಾಗರೋಪಾದಿಯಲ್ಲಿ ಜನ ಬಂದು ಹೊಲಗಳಲ್ಲಿ, ಬಿಡಾರ ಹೂಡುತ್ತಾರೆ. ಜನರ ಅನುಕೂಲಕ್ಕಾಗಿ ಸರ್ಕಾರ ಅನೇಕ ಬಸ್ಸುಗಳ ವ್ಯವಸ್ಥೆಯನ್ನು ಕಲ್ಪಿಸುತ್ತದೆ. ಬಹಳ ಎತ್ತರವಾದ ತೇರುಗಳನ್ನು ಹಳ್ಳ–ದಿಣ್ಣೆ, ಹೊಲ–ಗದ್ದೆ ಎಲ್ಲೆಂದರಲ್ಲಿ ಎಳೆದುಕೊಂಡು ಬರಲಾಗುತ್ತದೆ. ಇಲ್ಲಿ ವಿಶೇಷವಾಗಿ ಎತ್ತುಗಳ ಮೂಲಕ ತೇರನ್ನು ಎಳೆಯಲಾಗುತ್ತದೆ. ಒಂದು ತೇರಿಗೆ ೨೫–೩೦ ಜೊತೆ ಎತ್ತುಗಳನ್ನು ಕಟ್ಟಲಾಗಿರುತ್ತದೆ.

ಬಹಳ ಹಿಂದೆ ಈ ಗ್ರಾಮಕ್ಕೆ ೧೦೧ ತೇರುಗಳನ್ನು ಕಟ್ಟಲಾಗುತ್ತಿತ್ತು ಎಂದು ಹೇಳುತ್ತಾರೆ. ಹುಸ್ಕೂರು ಗ್ರಾಮದಲ್ಲಿ ಕಲ್ಲಿನ ರಥ ಇತ್ತು ಎಂಬುದಕ್ಕೆ ನಮಗೆ ಈಗಲೂ ಕುರುಹುಗಳು ಸಿಗುತ್ತವೆ. ಮದ್ದೂರಮ್ಮ ದೇವಾಲಯದ ಎದುರಿಗೆ ಕಲ್ಲಿನ ಚಕ್ರಗಳು ಇರುವುದನ್ನು ಕಾಣಬಹುದು. ಈಗ ಈ ಊರಿಗೆ ೧೦–೧೨ ತೇರುಗಳು ಬರುತ್ತವೆ. ಆದರೆ ಯಾವ ರಥದಲ್ಲಿಯೂ ಸಹ ದೇವರ ಪ್ರತಿಷ್ಠಾಪನೆ ಮಾಡಿರುವುದಿಲ್ಲ. ಕಾರಣ ದುರ್ಗಮ ಜಾಗಗಳನ್ನೆಲ್ಲಾ ಕ್ರಮಿಸಿ ತೇರುಗಳು ಬರಬೇಕ್ಕಾದ್ದರಿಂದ ದೇವರನ್ನು ಸುರಕ್ಷಿತವಾಗಿ ಕೊಂಡೊಯ್ಯುವುದು ಕಷ್ಟಕರ ಎಂಬ ಉದ್ದೇಶದಿಂದ ತೇರಿನೊಂದಿಗೆ ದೇವರುಗಳನ್ನು ತರಲಾಗುವುದಿಲ್ಲ.

ಅಂದು ಸಂಜೆ ಊರಿನಲ್ಲಿ ಕೀಲುಕುದುರೆ, ನಾಟಕ, ನೃತ್ಯ ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಲಾಗುತ್ತದೆ. ಜನರು ಮನರಂಜನೆಯ ಸವಿಯೊಂದಿಗೆ ಉಲ್ಲಾಸವನ್ನು

ಅನುಭವಿಸುತ್ತಾರೆ. ಇಷ್ಟೆಲ್ಲ ಮುಗಿಯುವ ವೇಳೆಗೆ ಎರಡು ದಿನಗಳು ಕಳೆದು, ಮಾರನೆಯ ದಿನಕ್ಕೆ ದೇವಿಯ ಜಾತ್ರೆಯ ಉತ್ಸವ ಪ್ರಾರಂಭಗೊಳ್ಳುತ್ತದೆ. ಅದು ಭಾನುವಾರ ಜನರ ಸಾಗರವೇ ತುಂಬಿ ತುಳುಕುತ್ತಿರುತ್ತವೆ. ಮಕ್ಕಳಿಗಾಗಿಯೇ ಕರ್ನಾಟಕದ ಸರ್ಕಾರವತಿಯಿಂದ 'ಸಿಡಿ' ನಡೆಯುತ್ತದೆ. ಸಿಡಿವೀರಣ್ಣನನ್ನು ದೊಡ್ಡ ಮರದಲ್ಲಿ ಎತ್ತರಕ್ಕೆ ಕಟ್ಟಿ ಕಲ್ಲಿನ ರಥವನ್ನು ಮೂರು ಸಲ ಸುತ್ತಿ ಬರುತ್ತದೆ. ನಂತರ ದೇವಸ್ಥಾನಕ್ಕೆ ಕೊಂಡೊಯ್ಯುತ್ತಾರೆ. ಭಕ್ತಾದಿಗಳು ತಮ್ಮ ಮಕ್ಕಳನ್ನು ಆ ಸಿಡಿಯ ಮೇಲೆ ಕುಳ್ಳರಿಸುತ್ತಾರೆ. ಇದರಿಂದ ಮಗುವಿಗೆ ಯಾವುದೇ ರೀತಿಯ ಕಾಯಿಲೆ ಬರುವುದಿಲ್ಲ ಎಂಬ ನಂಬಿಕೆಯಿದೆ. ಅಂದು ದೇವಿಗೆ ವಿವಿಧ ಊರುಗಳಿಂದ ಬಂದಂತಹ ಭಕ್ತಾದಿಗಳು ಕುರಿ, ಮೇಕೆ, ಕೋಳಿಗಳನ್ನು ಬಲಿ ನೀಡಿ ಅಲ್ಲೇ ಬಯಲುಗಳಲ್ಲಿಯೇ ಅಡಿಗೆ ಸಿದ್ಧಗೊಳಿಸಿ ತಿನ್ನುತ್ತಾರೆ. ಈ ದೃಶ್ಯವಂತೂ ಯಶೋಧರ ಚರಿತೆಯಲ್ಲಿ ಚಿತ್ರಿತವಾಗಿರುವ ಮಾರಿ ದೇವಿಯ ಜಾತ್ರೆಯನ್ನು ನೆನಪಿಸುವಂತಿರುತ್ತದೆ. ಇಷ್ಟೆಲ್ಲ ಮುಗಿದ ನಂತರ ಅಂದು ರಾತ್ರಿ ಕರಗ ಹಾಗೂ ಪಲ್ಲಕ್ಕಿಯ ಉತ್ಸವ ನಡೆಯುತ್ತದೆ. ಕರಗವು ಬೆಂಕಿ ಹೊಂಡದಲ್ಲಿ ಕುಣಿಯುವ ದೃಶ್ಯವಂತೂ ರೋಮಾಂಚನಕಾರಿಯಾಗಿರುತ್ತದೆ. ಹುಸ್ಕೂರು ಗ್ರಾಮದ ಸುತ್ತಮುತ್ತಲಿನ ಗ್ರಾಮಗಳ ಗ್ರಾಮದೇವತೆಗಳ ಪಲ್ಲಕ್ಕಿಗಳು ಜನರ ಗಮನವನ್ನು ಸೆಳೆಯುತ್ತದೆ. ಸುಮಾರು ೩೫-೫೦ ಪಲ್ಲಕ್ಕೀಗಳು ದೇವಸ್ಥಾನದ ಬಳಿಗೆ ಬರುತ್ತದೆ. ನಂತರ ಉತ್ಸವ ಮುಗಿಸಿಕೊಂಡು ತಮ್ಮ ತಮ್ಮ ಊರುಗಳಿಗೆ ಹಿಂತಿರುಗುತ್ತವೆ. ಹಾಗೆಯೇ ಮೂರು ದಿನಗಳಿಂದ ಬೇರೆ ಬೇರೆ ಊರುಗಳಿಂದ ಬಂದಿದ್ದ ತೇರುಗಳು ಕೊನೆಯ ದಿನ ಮಂಗಳವಾರದಂದು ಮತ್ತೆ ಆ ಊರುಗಳಿಗೆ ಹಿಂದಿರುಗುವುದರೊಂದಿಗೆ ಜಾತ್ರೆ ಮುಕ್ತಾಯವಾಗುತ್ತದೆ. ಒಟ್ಟಾರೆ ಶುಕ್ರವಾರ ಪ್ರಾರಂಭಗೊಂಡು ಮಂಗಳವಾರಕ್ಕೆ ಜಾತ್ರೆ ಮುಗಿಯುತ್ತದೆ. ಅಂದರೆ ೫ ದಿನಗಳ ಸಂಭ್ರಮದ ಆಚರಣೆಯಾಗಿದೆ.

ಈ ಜಾತ್ರೆಯ ವಿಶೇಷತೆಯನ್ನು ಗಮನಿಸಿದಾಗ ಇದೊಂದು ಸಂಪೂರ್ಣ ಗ್ರಾಮದೇವತೆಯ ಜಾತ್ರೆಯಾಗಿದ್ದು, ರಥೋತ್ಸವ, ದೀಪೋತ್ಸವ, ಪಲ್ಲಕ್ಕಿ ಉತ್ಸವಗಳು ಜೊತೆ ಜೊತೆಗೆ ನಡೆದರೆ ಬೇಗೂರಿನಲ್ಲಿ ದೀಪೋತ್ಸವ ದಿನವೇ ಬೇರೆಯಾಗಿರುತ್ತದೆ. ಇನ್ನು ಕೊಂಡ ಹಾಯುವುದು, ದೀಪೋತ್ಸವ ಆಚರಣೆ ಸಾರುವ ವಿಧಾನ ಎಲ್ಲವೂ ಸಹ ಬೇಗೂರು ಜಾತ್ರೆಯೊಂದಿಗೆ ಸಾಮ್ಯತೆ ಪಡೆದುಕೊಂಡಿದೆ. ಆನೇಕಲ್ ತಾಲ್ಲೂಕಿನ ಹೆಚ್ಚಿನ ಜಾತ್ರೆಗಳು ಈ ಮಾದರಿಯದ್ದಾಗಿದೆ ಎಂದು ಹೇಳಬಹುದು. ಒಟ್ಟಾರೆ ಹುಸ್ಕೂರು ಜಾತ್ರೆ ಕರ್ನಾಟಕ ಪ್ರಸಿದ್ಧ ಜಾತ್ರೆಗಳ ಸಾಲಿಗೆ ಸೇರುವಂತಹ ವೈವಿಧ್ಯಪೂರ್ಣವಾದ್ದಾಗಿದೆ.

**ಕ್ರಿಸ್ತನ ಜಯಂತಿ:-**

ಬೇಗೂರು ಕ್ಷೇತ್ರದಲ್ಲಿ ಬಹುಸಂಖ್ಯಾತರಾಗಿ ಕಾಣಿಸಿಕೊಳ್ಳುವ ಎರಡನೆಯ ವರ್ಗವೇ ಕ್ರೈಸ್ತ ಧರ್ಮಿಯರು. ಇಲ್ಲಿನ ಕ್ರೈಸ್ತ ಧರ್ಮಿಯರು ರೋಮನ್ ಕ್ಯಾಥೋಲಿಕ್ ವರ್ಗಕ್ಕೆ ಸೇರಿದ್ದು. ಎರಡು ಸಂಸ್ಕೃತಿಗಳ ಸಮ್ಮಿಳನ ಎಂಬಂತೆ ಕಂಡುಬರುತ್ತಾರೆ. ಇವರು ಹಿಂದೂ ಧರ್ಮಿಯರು ಆಚರಿಸುವ

ಯಾವುದೇ ಹಬ್ಬಗಳನ್ನು ಆಚರಿಸುವುದಿಲ್ಲ. ಇವರು ರಥೋತ್ಸವದಲ್ಲಾಗಲಿ, ಊರಬ್ಬದಲ್ಲಾಗಲಿ ಸಂಪೂರ್ಣವಾಗಿ ಭಾಗಿಗಳಾಗುವುದಿಲ್ಲ. ಇವರ ಬಹುಮುಖ್ಯ ಹಾಗೂ ಮಹತ್ವದ ಆಚರಣೆಗಳೆಂದರೆ 'ಕ್ರಿಸ್ತನ ಜಯಂತಿ' ಹಾಗೂ 'ಕ್ರಿಸ್ತನ ಜಾತ್ರೆ'. ಬೇಗೂರಿನಲ್ಲಿ ಸುಂದರವಾಗಿ ಚರ್ಚ್ ಇದ್ದು ಪ್ರತಿದಿನ ವಿಶೇಷ ಪ್ರಾರ್ಥನೆಯನ್ನು ನಡೆಸಲಾಗುವುದು. ಕ್ರಿಸ್ತನ ಜಯಂತಿಯಂದು ಯೇಸು ದೇವರ ಮೆರವಣಿಗೆಯನ್ನು ಹೂವಿನ ಮಂಟಪ ಅಥವಾ ಪಲ್ಲಕ್ಕಿಯಲ್ಲಿ ಮೆರವಣಿಗೆ ನಡೆಸುತ್ತಾರೆ. ಬೇಗೂರು ಚರ್ಚ್‌ನಿಂದ ಪ್ರಾರಂಭವಾಗುವ ಮೆರವಣಿಗೆ ಇಂದು ವಿಶ್ವಪ್ರಿಯನಗರದವರೆಗೆ ಸಾಗುತ್ತದೆ. ಈ ಉತ್ಸವದಲ್ಲಿ ಎಲ್ಲರೂ ಏಕಮನಸ್ಕರಾಗಿ ಮೇಣದ ಬತ್ತಿಯನ್ನು ಕೈಯಲ್ಲಿ ಹಿಡಿದು ಶಿಸ್ತಿನಿಂದ ದೇವರ ಸ್ಮರಣೆಯೊಂದಿಗೆ ಸಾಗುವುದು ಉತ್ಸವಕ್ಕೆ ಮೆರುಗನ್ನು ತಂದುಕೊಡುತ್ತದೆ.

ಕ್ರೈಸ್ತರು ಈ ಆಚರಣೆಯ ಜೊತೆಗೆ ಮತ್ತೊಂದು ಬಹು ಅದ್ದೂರಿಯಾದ ಜಾತ್ರೆಯನ್ನು ಮಾಡುತ್ತಾರೆ. ಈ ಜಾತ್ರೆಯಲ್ಲಿ ಕ್ರಿಸ್ತನನ್ನು ಮೆರವಣಿಗೆಯಲ್ಲಿ ಬೀದಿ-ಬೀದಿ ಸುತ್ತಿ ಜನರಿಗೆ ದೇವರ ದರ್ಶನ ನೀಡುವುದು ವಿಶೇಷವಾಗಿದೆ. ಈ ಆಚರಣೆ ರಾತ್ರಿ ಸಮಯದಲ್ಲಿ ಮಾಡುವುದು ರೂಢಿಗತವಾಗಿ ಬಂದಿದೆ.

ಹಿಂದೂ ಮತ್ತು ಕ್ರೈಸ್ತ ಧರ್ಮಿಯರನ್ನು ಬಿಟ್ಟರೆ ಇಲ್ಲಿ ಅಲ್ಪಸಂಖ್ಯಾತರಾಗಿ ಮುಸ್ಲಿಂ ಜನಾಂಗದವರು ಕಂಡುಬರುತ್ತಾರೆ. ಆದರೆ ಇಲ್ಲಿ ಇವರು ಯಾವುದೇ ಸಾರ್ವತ್ರಿಕವಾವದ ಆಚರಣೆಯನ್ನು ಮಾಡುವುದಿಲ್ಲ. ಒಟ್ಟಾರೆಯಾಗಿ ಬೇಗೂರಿನಲ್ಲಿ ನಡೆಯುವ ಆಚರಣೆಗಳು ಸಾಂಸ್ಕೃತಿಕವಾಗಿ ಮಹತ್ವಯುತವಾಗಿದ್ದು, ಮುಂದಿನ ಪೀಳಿಗೆಗೆ ನಿರಂತರ ಬಳುವಳಿಯಾಗಿ ಬಂದಿರುವ ಆಚರಣೆಗಳು ಎನ್ನಬಹುದು. ಇಲ್ಲಿ ಬೆಂಪೂರು-೧೨ರ ಆಚರಣೆ ಎಂದಾಗ ಕೇವಲ ಬೇಗೂರಿನ ಬ್ರಹ್ಮರಥೋತ್ಸವನ್ನಷ್ಟೇ ಗುರ್ತಿಸಬಹುದು. ಊರಬ್ಬ, ಕ್ರಿಸ್ತನ ಜಯಂತಿ, ಇವುಗಳು ಬೇಗೂರು ಸಾಂಸ್ಕೃತಿಕವಾಗಿ ಹೇಗೆ ಬೆಳೆದು ನಿಂತಿದೆ. ಅದರ ಆಚರಣೆಗಳೇನು? ಎಂಬುದಕ್ಕೆ ದಾಖಲಾಗುವಂತಹವು.

ಬೆಂಪೂರು-೧೨ರ ನಾಮನಿರ್ದೇಶನದಲ್ಲಿ ಬರುವ ಎಲ್ಲಾ ೧೨ ಊರುಗಳು ಈಗ ಸಂಪೂರ್ಣವಾಗಿ ಭಾಗವಹಿಸುವುದಿಲ್ಲ. ಕೆಲವು ಗ್ರಾಮಗಳಂತು ನಮಗೂ ಬೇಗೂರಿಗೂ ಸಂಬಂಧವಿಲ್ಲ ಎಂಬಂತಿದೆ. ಕಾರಣ ಬೆಂಪೂರು-೧೨ ಎಂಬುದು ಒಂದು ನಿರ್ದಿಷ್ಟ ಆಡಳಿತಕ್ಕೆ ಒಳಪಟ್ಟ ಪ್ರದೇಶವೇ ವಿನಃ ಆಚರಣೆಗಳು, ಧಾರ್ಮಿಕ ವಿಧಿ-ವಿಧಾನಗಳಲ್ಲಿ ಅವುಗಳ ಪಾತ್ರ ಕಡಿಮೆ. ಸಾಂಸ್ಕೃತಿಕವಾಗಿ ಇಲ್ಲಿನ ಜನರ ಜೀವನ ರೀತಿ-ನೀತಿಗಳನ್ನು ಕಟ್ಟಿಕೊಡುವುದು ಈ ಆಚರಣೆಗಳಿಂದ ತಿಳಿಯುತ್ತದೆ.

**೫.೩. ಆರ್ಥಿಕ ಸ್ಥಿತಿ-ಗತಿ:-**

ಆರ್ಥಿಕವಾಗಿ ಬೇಗೂರಿನ ಸ್ಥಿತಿಯನ್ನು ನೋಡಿದಾಗ ನಾವು ಎರಡು ಸ್ತರದಲ್ಲಿ ನಿಂತು ಯೋಚಿಸುವ ಬಗೆಯನ್ನು ರೂಢಿಸಿಕೊಳ್ಳಬೇಕಾಗುತ್ತದೆ.

೧. ಮೊದಲಿನಿಂದಲೂ ಆರ್ಥಿಕವಾಗಿ ಸದೃಢತೆಯನ್ನು ಸಾಧಿಸಿಕೊಂಡು ಬಂದಿರುವ ಪ್ರಬಲವರ್ಗ

೨. ಮೊದಲಿನಿಂದಲೂ ಆರ್ಥಿಕವಾಗಿ ದುರ್ಬಲವಾಗಿರುವ ಮತ್ತೊಂದು ವರ್ಗ

ಎಂದು ಎರಡು ಭಾಗ ಮಾಡಿ ಚರ್ಚಿಸುವುದು ಹೆಚ್ಚು ಸೂಕ್ತ ಎನಿಸುತ್ತದೆ.

ಪ್ರಾಚೀನ ಕಾಲದಿಂದಲೂ ಇಲ್ಲಿನ ಆರ್ಥಿಕ ಮೂಲಗಳು ಯಾವುವು ಎಂದು ಗಮನಿಸಿದಾಗ ಬಹುಮುಖ್ಯ ಮೂಲವೆಂದರೆ ಕೃಷಿ. ಬೇಗೂರು ಕ್ಷೇತ್ರದಲ್ಲಿ ಬಹುವಿಸ್ತಾರವಾದ ಕೃಷಿಭೂಮಿ ಇದ್ದು ಸಮೃದ್ಧ ನೀರಾವರಿ ಪ್ರದೇಶವಾದ್ದರಿಂದ ಜನರ ಮುಖ್ಯ ಆರ್ಥಿಕ ಮೂಲವಾಗಿತ್ತು. ಈ ಪ್ರದೇಶದಲ್ಲಿ ಶೇ ೨೫ರಷ್ಟು ಭೂಮಿ ಒಣಭೂಮಿಯಾಗಿದ್ದು, ಅಂತಹ ಪ್ರದೇಶದಲ್ಲಿ ರಾಗಿ ಬೆಳೆಯಲಾಗುತ್ತದೆ. ಆದರೆ ಬೇಗೂರು ಕ್ಷೇತ್ರದಲ್ಲಿ ಸಂಪೂರ್ಣ ಮಳೆಯಾಧಾರಿತ ಕೃಷಿಯಾದರೂ ವರ್ಷಪೂರ್ತಿ ಕೆರೆಯಲ್ಲಿ ನೀರು ಸಂಗ್ರಹವಾಗುವುದರಿಂದ ನೀರಾವರಿ ಸಮಸ್ಯೆ ಎದ್ದು ಕಾಣುವುದಿಲ್ಲ. ಆದರೆ ಇಲ್ಲಿ ದೊರೆಯುವ ನೀರಿನಿಂದ ಸಂಪೂರ್ಣ ಪ್ರದೇಶವನ್ನು ವರ್ಷಪೂರ್ತಿ ಕೃಷಿಯಲ್ಲಿ ತೊಡಗಿಸಲಾಗುತ್ತಿರಲಿಲ್ಲ. ಆದ್ದರಿಂದ ಕೆರೆಯಿಂದ ತುಂಬ ದೂರದ ಪ್ರದೇಶಗಳನ್ನು ಕೃಷಿಗೆ ಬಳಪಡಿಸುವುದು ಕಷ್ಟಕರವಾಗಿತ್ತು. ಮೊದಲಿನಿಂದಲೂ ಇಲ್ಲಿ ಕಬ್ಬನ್ನು ಹೆಚ್ಚಾಗಿ ಬೆಳೆಯುತ್ತಿದ್ದು. ಈ ಪ್ರದೇಶದಲ್ಲಿ ಹೆಚ್ಚು ಆಲೆಮನೆಗಳಿದ್ದವು ಎಂದು ಜನಪದೀಯರಿಂದ ತಿಳಿದು ಬರುತ್ತದೆ. ಕಾರಣಾಂತರಗಳಿಂದ ಕಾಲ ಕಳೆದಂತೆ ಭತ್ತ ಮತ್ತು ರಾಗಿಗೆ ಸೀಮಿತವಾಯಿತು. ಕೆರೆಯ ಸಮೀಪವಿದ್ದ ಕೆಲವು ಪ್ರದೇಶದಲ್ಲಿ ವರ್ಷಪೂರ್ತಿ ನೀರು ಸಿಗುವುದರಿಂದ ಸೊಪ್ಪು, ತರಕಾರಿಯನ್ನು ಬೆಳೆಯುತ್ತಿದ್ದರು. ಈ ಪ್ರದೇಶದಲ್ಲಿ ಇತ್ತೀಚಿನವರೆಗೂ ಭತ್ತ ಬೆಳೆಯುತ್ತಿದ್ದರು. ಆದರೆ ನಗರೀಕರಣ ಮತ್ತು ರಿಯಲ್ ಎಸ್ಟೇಟ್ ಉದ್ಯಮ ಬೃಹತ್ತಾಗಿ ಬೆಳೆದು ಸಂಪೂರ್ಣ ಕಾಂಕ್ರೇಟ್ ಕಾಡಾಗಿರುವುದನ್ನು ಗಮನಿಸಬಹುದು. ಈಗ ಕೆರೆಯ ನೀರು ವರ್ಷಪೂರ್ತಿ ಹಾಗೆಯೇ ಇದ್ದು. ಮೀನುಗಾರಿಕೆಗೆ ಮಾತ್ರ ಸೀಮಿತವಾಗಿದೆ. ವರ್ಷದಲ್ಲಿ ಹೆಚ್ಚು ಮಳೆ ಬಂದರೆ ಕೆರೆಯ ಕೋಡಿಯಿಂದ ಬಡಾವಣೆಗಳಿಗೆ ನೀರು ನುಗ್ಗಿ ಜನರು ಪರದಾಡುವಂತಾಗಿದೆ.

ಇಲ್ಲಿನ ಜನರ ಎರಡನೆ ಆರ್ಥಿಕ ಮೂಲವೆಂದರೆ ಹೈನುಗಾರಿಕೆ. ನಾಗತ್ತರನ ಕಾಲದಲ್ಲಿಯೇ ಹಸುಗಳನ್ನು ಸಂಪತ್ತಿನ ರೂಪದಲ್ಲಿ ನೋಡುತ್ತಿದ್ದನ್ನು ಕಾಣುತ್ತೇವೆ. ಇದಕ್ಕೆ ನಿದರ್ಶನವಾಗಿ ಈಗಲೂ ಸಹ ಚಿಕ್ಕಬೇಗೂರಿನಿಂದ ದೊಡ್ಡ ಬೇಗೂರಿಗೆ ಸಾಗುವ ಕಟ್ಟೆಯ ಮೇಲೆ ತುರುಗೋಳು ದಾನಶಾಸನವನ್ನು ಕಾಣುತ್ತೇವೆ. ನೂರು ಹಸುಗಳನ್ನು ದಾನವಾಗಿ ನೀಡಿದಾಗ ಮಾತ್ರ ಆ ಕಲ್ಲನ್ನು ಸ್ಮರಣಾರ್ಥವಾಗಿ ನಿಲ್ಲಿಸುವುದು ರೂಢಿಗತವಾಗಿ ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿರುವ ಪದ್ಧತಿ. ಈಗಲೂ ಸಹ ಆ ಕಲ್ಲಿಗೆ ಜನ ಹಾಲನ್ನು ಹಾಕುತ್ತಾರೆ. ಗೋವಿನಕಲ್ಲು ಎಂದು ಪೂಜನೀಯವಾಗಿ ಕಂಡಿದ್ದರ ಪರಿಣಾಮ ಇಲ್ಲಿಯವರೆಗೂ ಕಾಪಾಡಿಕೊಂಡು ಬರಲಾಗಿದೆ. ಆದ್ದರಿಂದ ಈ ಗೋವಿನ ಕಲ್ಲಿನ ನಿದರ್ಶನವೇ ಸಾಕು ಈ ಪ್ರದೇಶದಲ್ಲಿ ಹೈನುಗಾರಿಕೆ ಯಾವ ಹಂತದಲ್ಲಿತ್ತು ಎಂದು ತಿಳಿಯಲು. ಮೊದಲು ಇಲ್ಲಿನ ಜನರು ಬೆಣ್ಣೆ, ತುಪ್ಪ, ಹಾಲನ್ನು ಮಾರಲು ಅಪಾರಸಂಖ್ಯೆಯಲ್ಲಿ ಬೆಂಗಳೂರು ಪಟ್ಟಣಕ್ಕೆ

ಎತ್ತಿನಗಾಡಿಗಳಲ್ಲಿ ಹೋಗಿ ಮಾರಿಕೊಂಡು ಬರುತ್ತಿದ್ದರಂತೆ. ಅದರಲ್ಲೇ ಅವರ ಜೀವನವನ್ನು ಸಾಗಿಸುತ್ತಿದ್ದ ಜನ. ಈಗ ಸಂಪೂರ್ಣವಾಗಿ ಬದಲಾದ ಪರಿಸ್ಥಿತಿಯಲ್ಲಿ ಇದ್ದಾರೆ. ಈಗಲೂ ಹೈನುಗಾರಿಕೆ ನಡೆದರು ಮೊದಲಿನ ಪ್ರಮಾಣದಲ್ಲಿಲ್ಲ. ಏನೇ ಆದರೂ ಈ ಪ್ರದೇಶದ ಜನರಿಗೆ ಹೈನುಗಾರಿಕೆ ಒಂದು ಜೀವನ ಆಧಾರವಾಗಿತ್ತು ಎಂಬುದನ್ನು ಮನಗಾಣಬಹುದು.

ಮೇಲಿನ ಎರಡು ಪ್ರಮುಖ ಆರ್ಥಿಕ ಮೂಲಗಳೆಂದು ತಿಳಿದರು ಸಹ ಸ್ವಲ್ಪ ಪ್ರಮಾಣದ ಜನ ಬೇರೆ ಚಟುವಟಿಕೆಯಲ್ಲಿ ತೊಡಗಿರುವುದು ಕಾಣುತ್ತೇವೆ. ಕೆಲವು ವೃತ್ತಿಗಳು ವಂಶಪರಂಪರೆಯಿಂದ ಬೆಳೆದು ಬಂದಿರುತ್ತದೆ. ಅಂತಹ ಕೌಶಲಗಳಾದ ಬಿದಿರಿನಿಂದ ಬುಟ್ಟಿ ನೇಯುವುದು, ಕುಲುಮೆ ಕೆಲಸ, ಮಡಕೆ ಮಾಡುವುದು ಇತ್ಯಾದಿ. ಆದರೆ ಈ ವೃತ್ತಿಗಳು ಆಧುನಿಕತೆಯ ದವಡೆಗೆ ಸಿಕ್ಕಿ ಮೂಲೆಗುಂಪಾದವು. ಆದರೂ ಈ ಭಾಗದಲ್ಲಿ ಇಂದಿಗೂ ಸಹ ಒಂದೊಂದು ಕುಟುಂಬ ಕುಲುಮೆ ಮತ್ತು ಬುಟ್ಟಿಯನ್ನು ನೇಯುವುದರ ಮೂಲಕ ಜೀವನ ಸಾಗಿಸುವುದನ್ನು ಕಾಣುತ್ತೇವೆ. ಆದರೆ ಕುಂಬಾರನ ವೃತ್ತಿ ಸಂಪೂರ್ಣವಾಗಿ ನಿಂತಿದೆ.

ಮೇಲಿನ ಈ ಎಲ್ಲಾ ಆರ್ಥಿಕ ಮೂಲಗಳೆಂದು ನಾವು ಗುರ್ತಿಸಿದರೂ ಸಾಮಾಜಿಕವಾಗಿ ಎರಡು ಸ್ತರವನ್ನು ನಾವು ಗಮನಿಸಬಹುದು. ಈ ಭಾಗದಲ್ಲಿ ಉನ್ನತವರ್ಗವೆಂದು ಗುರ್ತಿಸುವ ಬ್ರಾಹ್ಮಣರು ಜನಸಂಖ್ಯೆಯಲ್ಲಿ ಕಡಿಮೆ. ಪೂಜಾ ವಿಧಿ-ವಿಧಾನಗಳೇ ಅವರ ಮುಖ್ಯ ಕಾರ್ಯ. ಆದರೆ ಒಕ್ಕಲಿಗ ಜನಾಂಗ ಪ್ರಬಲವಾಗಿ ಇದ್ದು ಅಧಿಕಾರಶಾಹಿಯನ್ನು ತನ್ನ ಹಿಡಿತದಲ್ಲಿಟ್ಟುಕೊಂಡು ಬಂದಿರುವುದು ಕಾಣುತ್ತೇವೆ. ಇವರಿಗೆ ಸರಿ ಸಮಾನ ಎಂಬಂತೆ ಸಾದರ ಜನಾಂಗವು ಸಹ ಪ್ರಾಚೀನ ಕಾಲದಿಂದಲೂ ಆರ್ಥಿಕವಾಗಿ ಸದೃಢತೆಯನ್ನು ಸಾಧಿಸಿರುವುದು ಕಂಡರೆ ಸಾಮಾಜಿಕವಾಗಿ ಹಿಂದುಳಿದ ಜನಾಂಗ ಆರ್ಥಿಕವಾಗಿ ದೌರ್ಜನ್ಯಕ್ಕೆ ಒಳಗಾಗುತ್ತ ಕನಿಷ್ಟ ಜೀವನ ಸಾಗಿಸುತ್ತ ಬಂದಿರುವುದನ್ನು ಕಾಣುತ್ತೇವೆ. ಆದರೆ ಬೆಂಗಳೂರು ಅತಿ ಶೀಘ್ರವಾಗಿ ಬೆಳೆಯುತ್ತಿರುವ ನಗರಗಳಲ್ಲಿ ಒಂದು. ಬೇಗೂರು ಸಹ ಬೆಂಗಳೂರು ಮಾಯಾನಗರದ ತೆಕ್ಕೆಗೆ ಒಳಪಟ್ಟಿದ್ದು, ಆಧುನಿಕತೆಯ ಗಾಳಿ ರಭಸವಾಗಿಯೆ ಬೀಸತೊಡಗಿದೆ. ಬೆಂಗಳೂರು ಸಿಲಿಕಾನ್ ಸಿಟಿ ಎಂಬ ಹೆಗ್ಗಳಿಕೆಗೆ ಪಾತ್ರವಾದೊಡನೆಯೇ ಪ್ರಪಂಚಾದ್ಯಂತ ಹಲವಾರು ಉದ್ಯಮಿಗಳು ಬೆಂಗಳೂರು ಸುತ್ತಮುತ್ತಲಿನ ಭೂಮಿಗಳಲ್ಲಿ ಬಂಡವಾಳವನ್ನು ತೊಡಗಿಸಲು ಪ್ರಾರಂಭಿಸಿದರು. ಇದರಿಂದ ಹಿಂದುಳಿದ ವರ್ಗಕ್ಕೆ ಆರ್ಥಿಕವಾಗಿ ಸದೃಢವಾಗಲು ಬಹುದೊಡ್ಡ ಅವಕಾಶ ಸಿಕ್ಕಂತಾಯಿತು. ಕನಿಷ್ಟ ಜೀವನದಿಂದ ಮುಕ್ತಿ ಹೊಂದಿ ಪರಿವರ್ತನೆಯ ಹಾದಿಗೆ ತಲುಪಲು ಮುಂದಾದರು. ಹಾಗೆಯೇ ಇಲ್ಲಿ ಭೂಮಿಗೆ ಚಿನ್ನದ ಬೆಲೆ ನಿಗದಿಯಾದಂತೆ ಸಮುದಾಯದಲ್ಲಿದ್ದ ಆರ್ಥಿಕ ಅಸಮಾನತೆ ಕಡಿಮೆಯಾಗತೊಡಗಿತು. ಮಹಿಳೆಯರಿಗೆ ಬಟ್ಟೆ ಉದ್ಯಮ ಕೈ ಬೀಸಿ ಕರೆಯಲಾರಂಭಿಸಿತು. ಇದರಿಂದ ಇಂದು ಜಾಗತೀಕರಣ, ಉದಾರೀಕರಣ, ರಿಯಲ್ ಎಸ್ಟೇಟ್ ಉದ್ಯಮಗಳ ಪ್ರಭಾವದಿಂದ

ಆರ್ಥಿಕವಾಗಿ ಎಲ್ಲಾ ವರ್ಗದ ಜನ ಸದೃಢರಾಗಿರುವುದನ್ನು ಗಮನಿಸಬಹುದು. ಇಷ್ಟೇಲ್ಲ ಬೆಳವಣಿಗೆಯಾದರೂ ಸಹ ೧೦೦ಕ್ಕೆ ೧೦೦ರಷ್ಟು ಸುಧಾರಿಸಿದ್ದಾರೆ ಎಂದು ಹೇಳಲಾಗುವುದಿಲ್ಲ. ಕೆಲವು ಕುಟುಂಬಗಳೂ ಬಡತನ ರೇಖೆಗಿಂತ ಕೆಳಮಟ್ಟದಲ್ಲಿ ಬದುಕುವವರನ್ನು ಈಗಲೂ ಕಾಣುತ್ತೇವೆ. ಸರ್ಕಾರದ ಹಲವಾರು ಸುಧಾರಣೆಗಳು ಇಲ್ಲಿನ ಜನರ ಕೈ ಸೇರುತ್ತಿಲ್ಲ. ಆದರೂ ಸಹ ವಿದ್ಯಾಭ್ಯಾಸದಲ್ಲಿ ಮೊದಲಿಗಿಂತಲೂ ಹೆಚ್ಚು ಸುಧಾರಣೆಯನ್ನು ಕಂಡಿದ್ದು ಪ್ರತಿಯೊಂದು ಮನೆಯಲ್ಲೂ ಪ್ರತಿಭಾವಂತ ವಿದ್ಯಾರ್ಥಿಗಳನ್ನು ಗುರ್ತಿಸುವ ಮಟ್ಟದಲ್ಲಿ ಬೇಗೂರು ಬೆಳೆಯುತ್ತಿರುವುದು ಒಂದು ಹೆಮ್ಮೆಯ ಸಂಗತಿಯಾಗಿದೆ. ಸಾಂಸ್ಕೃತಿಕವಾಗಿ ತಮ್ಮದೇ ಆದ ಸಂಸ್ಕೃತಿಯನ್ನು ರೂಢಿಸಿಕೊಂಡು ಮಾದರಿ ಜೀವನವನ್ನು ಸಾಗಿಸುತ್ತಿರುವುದನ್ನು ಕಾಣಬಹುದು.

# ಅಧ್ಯಾಯ – ೬

## ಇಂದು ಬೇಗೂರಿನ ಸ್ಥಿತಿ–ಗತಿ

ಇಂದು ಬೇಗೂರು ಎಂದು ಕರೆಯಲ್ಪಡುವ ಊರು ಗಂಗರ ಕಾಲದಲ್ಲಿ 'ಬೆಂಪೂರು' ಎಂದು ಪ್ರಖ್ಯಾತಿ ಪಡೆದಿದ್ದು, ತರುವಾಯ ತಮಿಳರ ಪ್ರಭಾವದಿಂದ 'ವೆಪ್ಪೂರು' ಎಂದು ನಂತರ ಬೇಹೂರು, ಬೇಗೂರು ಎಂದು ಪರಿವರ್ತನೆಗೆ ಒಳಗಾಯಿತು ಎಂಬ ವಿಚಾರವನ್ನು ಸ್ಥಳನಾಮಗಳ ಅಧ್ಯಯನದಲ್ಲಿ ಚರ್ಚಿಸಿದ್ದೇವೆ. ಆದರೆ ಈ ಊರಿನ ಹೆಸರಿನ ಬದಲಾವಣೆಯೊಂದಿಗೆ ಇಲ್ಲಿನ ಪರಿಸರ, ಸಂಪ್ರದಾಯ, ರೀತಿ–ನೀತಿಗಳು, ಜನರ ಮನೋಧರ್ಮ ಎಲ್ಲವು ಸಹ ಬದಲಾಗುತ್ತ ಬಂದಿದೆ. ಕಾಲದವಡೆಗೆ ಸಿಕ್ಕಿ ನಂತರ ಚಲನೆಶೀಲತೆಯನ್ನು ಪಡೆದುಕೊಂಡು ಬಂದರು. ಸಾಂಸ್ಕೃತಿಕವಾಗಿ ಹೆಗ್ಗಳಿಕೆಯನ್ನು ತೋರಿಸುವ ಮಟ್ಟದಲ್ಲಿ ಇಂದು ಬೇಗೂರು ಇಲ್ಲ. ಸಾಮಾನ್ಯವಾಗಿ ಹೇಳುವಂತೆ ಆಧುನೀಕರಣ, ಜಾಗತೀಕರಣ,ಉದಾರೀಕರಣದಿಂದ ಜನರ ಜೀವನಕ್ರಮ ಸಂಸ್ಕೃತಿ, ಆಚರಣೆಗಳೆಲ್ಲ ಬದಲಾದವು ಎಂಬ ಮಾತು ಕ್ಲೀಷೆಯಾಗಬಹುದು. ಆದರೆ ಬೇಗೂರು ಕ್ಷೇತ್ರದ ಮೇಲೆ ಗಾಢವಾದ ಪ್ರಭಾವ ಬೀರಿದೆ.

ಒಂದು ಕಾಲದಲ್ಲಿ ಸಮೃದ್ಧಕೃಷಿಯಲ್ಲಿ ತೊಡಗಿದ್ದ ಇಲ್ಲಿನ ಜನ ಆರ್ಥಿಕವಾಗಿ ಪ್ರಾಬಲ್ಯತೆಯನ್ನು ಮೆರೆದಿದ್ದರೂ ಈ ಭಾಗದಲ್ಲಿ ಹವ್ಯಾಸಿಕೃಷಿಕರು ತುಂಬ ಕಾಲದ ಹಿಂದೆ ತಮ್ಮ ಧೋರಣೆಯನ್ನು ಬದಲಾಯಿಸಿ ಜೀವನಾವಶ್ಯಕ ಕೃಷಿಗೆ ಮುಂದಾಗಿರುವುದನ್ನು ಕಾಣುತ್ತೇವೆ. ಕಾರಣ ಆಧುನೀಕತೆಯ ಗಾಢವಾದ ಪ್ರಭಾವ. ಪೂರ್ವಿಕರು ಹೇಳುವಂತೆ ಬೇಗೂರು ಗ್ರಾಮ ಚಿಕ್ಕಬೇಗೂರು ಪ್ರದೇಶದಲ್ಲಿ ಕಬ್ಬು, ಕಡಲೇ, ರಾಗಿ, ಭತ್ತ, ಜೋಳಗಳನ್ನು ಅಧಿಕವಾಗಿ ಬೆಳೆಯುತ್ತಿದ್ದ ಪ್ರದೇಶವಾಗಿತ್ತು. ಆಲೆಮನೆಗಳನ್ನು ಹೊಂದಿದ್ದ ಪ್ರದೇಶವಾಗಿದ್ದು, ನೀರಾವರಿ ಸಮಸ್ಯೆಗಳಿಂದ ತಮ್ಮ ಕೃಷಿ ಬದುಕನ್ನು ಬದಲಾಯಿಸಿಕೊಂಡರು ಎಂಬುದು. ಆದರೆ ಇಲ್ಲಿ ಚರ್ಚಿಸಬೇಕಾದ ವಿಷಯವೆಂದರೆ ಇಂದು ಬೇಗೂರ ಸಂಪೂರ್ಣಕೃಷಿಮುಕ್ತ ಪ್ರದೇಶವಾಗಿದ್ದು, ಸಂಪೂರ್ಣವಾಗಿ ಕಾಂಕ್ರಿಟ್ ಕಾಡಿನಂತೆ ಎಲ್ಲೆಲ್ಲೂ ಮನೆಗಳು, ಕೈಗಾರಿಕೆಗಳು ನಿರ್ಮಿಸಿರುವುದನ್ನು ಕಾಣಬಹುದು.

ಹಸಿರು ರಾಶಿಯಿಂದ ಕಂಗೊಳಿಸುತ್ತಿದ್ದ ಬೇಗೂರು ಕಾಂಕ್ರೀಟ್ ಕಾಡಾಗಿ ಕಣ್ಣುಕುಕ್ಕುತ್ತಿದೆ. ಈ ಪ್ರದೇಶಗಳಿಗೆ ಬೇಡಿಕೆ ಹೆಚ್ಚಾದ್ದರಿಂದ 'ರಿಯಲ್ ಎಸ್ಟೇಟ್' ಬೃಹತ್ ಆಗಿ ಬೆಳೆದುನಿಂತಿದೆ. ಮನೆಗಳ ನಿರ್ಮಾಣದ ಅಡಿಗೆ ಸಿಕ್ಕಿ ಸಂಪೂರ್ಣ ಪರಿಸರವೇ ಬದಲಾಗಿದೆ. ಆನೇಕಲ್ ಸುತ್ತಮುತ್ತ ಹೆಸರೇ ಸೂಚಿಸುವಂತೆ 'ಗಜಕಲ್ ಪುರ' ಎಂದು ಪ್ರಖ್ಯಾತಿ ಪಡೆದ ಪ್ರದೇಶಕ್ಕೆ ಒಳಪಡುವುದರಿಂದ ಆನೆಗಾತ್ರದ ಕಲ್ಲುಗಳು ಈ ಪ್ರದೇಶದಲ್ಲಿದ್ದವು ಎಂದು ಹೇಳುತ್ತಾರೆ. ಆದರೆ ಅದಕ್ಕೆ ಸಾಕ್ಷಿಯಾಗಿದ್ದ ಬೆಟ್ಟಗುಡ್ಡಗಳು, ಗಣಿಗಾರಿಕೆಯಿಂದ ಸಹಜ ಸೌಂದರ್ಯವನ್ನು ಕಳೆದುಕೊಂಡಿದೆ. ಬೇಗೂರು ಸುತ್ತಮುತ್ತ ಇದ್ದ

ಊರುಗಳಾದ ಬೆಟ್ಟದಾಸನಪುರ, ಹುಲಿಮಂಗಲ, ಬೇಗೂರು ಮುಂತಾದ ಪ್ರದೇಶಗಳಲ್ಲಿ ಕಲ್ಲಿನ ಗಣಿಗಾರಿಕೆ ಅಧಿಕಪ್ರಾಮಾಣದಲ್ಲಿ ನಡೆಯುತ್ತಿರುವುದರಿಂದ ಸಣ್ಣ ಪ್ರಮಾಣದ ಬೆಟ್ಟಗಳೆಲ್ಲ ನಾಶದ ಅಂಚಿನಲ್ಲಿ ಬಂದು ನಿಂತಿದೆ.

ಬೆಂಪೂರು ಪ್ರದೇಶದ ಒಂದು ವರ್ಗದ ಜನ ಲಾಭದ ದೃಷ್ಟಿಯಿಂದ ನೋಡಿದರೆ ಅದರಿಂದ ನಷ್ಟವನ್ನು ಅನುಭವಿಸುವ ವರ್ಗವೇ ಒಂದು. ಆದರೆ ಇಲ್ಲಿನ ಮಹತ್ವವನ್ನು ಅರಿತು ಸಾಂಸ್ಕೃತಿಕವಾಗಿ ಬಲಿಷ್ಠಗೊಳಿಸುವ, ಬೇಗೂರನ್ನು ಸಾಂಸ್ಕೃತಿಕವಾಗಿ ಉಳಿಸಿಕೊಳ್ಳುವ ಪ್ರಯತ್ನ ಕಡಿಮೆ. ದೊಡ್ಡಕೆರೆ ಮತ್ತು ಸಣ್ಣಕೆರೆ ಎಂದು ಎರಡು ಕೆರೆಗಳಿದ್ದರೂ ಕೂಡ ಅದರಿಂದ ಸಂಪೂರ್ಣ ಸದುಪಯೋಗ ಪಡೆಯುವ ಸ್ಥಿತಿಯಲ್ಲಿ ಜನರಿಲ್ಲ. ಕೆರೆಯ ಪಕ್ಕದಲ್ಲಿಯೇ ಕೊಳವೆ ಬಾವಿಯನ್ನು ತೋಡಿಸಿದರು. ನೀರು ಕಾಣುವುದು ಅಸಾಧ್ಯದ ಸಂಗತಿ. ಸಂಪೂರ್ಣ ನೀರಾವರಿ ಪ್ರದೇಶವಾಗಿದ್ದ ಬೇಗೂರು ಇಂದು ನೀರನ್ನು ಕೊಂಡು ಕೊಳ್ಳುವ ಸ್ಥಿತಿಯಲ್ಲಿದೆ. ಇದಕ್ಕೆ ಹಲವಾರು ಕಾರಣಗಳಿರಬಹುದು. ಜನರ ಸಾಂದ್ರತೆ ದಿನೇ ದಿನೇ ಅಧಿಕವಾಗುತ್ತಿದೆ. ಕೆಲಸವನ್ನು ಬಯಸಿ ಗ್ರಾಮಗಳನ್ನು ತೊರೆದು ಬೆಂಗಳೂರು ಸೇರುತ್ತಿರುವ ಜನರಿಗೆ ಆಶ್ರಯತಾಣವಾಗಿ ಬೇಗೂರು ಮಾರ್ಪಾಡುತ್ತಿದೆ. ಚಿಕ್ಕ ಕೆರೆಯಂತು ಸಂಪೂರ್ಣ ಉಪಯೋಗಕ್ಕೆ ಅಲಭ್ಯವಾದರೆ, ದೊಡ್ಡಕೆರೆ ಮೀನುಗಾರಿಕೆಗಾದರೂ ಉಪಯುಕ್ತವಾಗಿದೆ. ಈ ಕೆರೆಯ ಬಗ್ಗೆಯು ಉದಾಸೀನತೆ ಕಂಡರೆ ಇದರ ಉಪಯುಕ್ತತೆಯು ಸಂಪೂರ್ಣ ನಿಲ್ಲುವ ಸ್ಥಿತಿ ತಲುಪಬಹುದು. ಸಾಂಸ್ಕೃತಿಕವಾಗಿ ಮಹತ್ವ ಪಡೆದ ದೇವಾಲಯದ ಜೀರ್ಣೋದ್ಧಾರ ಬಹುಮಹತ್ವ ಹಾಗೂ ಉಪಯುಕ್ತವಾಗಿದೆ. ನಾಲ್ಕು ಮೂಲೆಗೂ ನಾಲ್ಕು ಗೋಪುರ ನಿರ್ಮಾಣದ ಕಾರ್ಯ ಭರದಿಂದ ಸಾಗುತ್ತಿದ್ದು ಜನರಿಗೆ ಭಕ್ತಿಯಲ್ಲಿನ ತಲ್ಲೀನತೆ ಹಾಗೂ ಆರ್ಥಿಕ ಸದೃಢತೆಯನ್ನು ಕಾಣಬಹುದು.

ಬೆಂಪೂರು-೧೨ರ ಬಹುಭಾಗ ಆನೇಕಲ್ ತಾಲ್ಲೂಕಿನಲ್ಲಿ ಉಳಿದರೆ, ಮಿಕ್ಕ ಕೆಲವು ಊರುಗಳು ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಗೆ ಒಳಪಟ್ಟಿದೆ. ಬೇಗೂರುನಲ್ಲಿ ಗ್ರಾಮಪಂಚಾಯಿತಿ ಇತ್ತೀಚಿನವರೆಗೂ ಅಸ್ತಿತ್ವದಲ್ಲಿತ್ತು. ಇತ್ತೀಚೆಗಷ್ಟೇ ಜನಸಾಂದ್ರತೆಯ ಮೇಲೆ ವಾರ್ಡ್‌ಗಳನ್ನು ವಿಂಗಡಿಸಿದಾಗ ಬೇಗೂರು ಮತ್ತು ಚಿಕ್ಕಬೇಗೂರು ಎರಡು ಸಹ ಒಂದೊಂದು ವಾರ್ಡಿಗಳಿಗೆ ಹಂಚಿಕೆಯಾಗಿರುವುದು ದೂರದೃಷ್ಟಕರ ಸಂಗತಿ. ಇಲ್ಲಿನ ಜನರಿಗೆ ಈ ವಿಷಯದಲ್ಲಿ ಅಸಮಾಧಾನತೆಯಿದ್ದು, ಹಲವಾರು ಅರ್ಜಿಗಳನ್ನು ಸರ್ಕಾರಕ್ಕೆ ಸಲ್ಲಿಸಿದ್ದರೂ ಸಹ ಬೇಗೂರಿನೊಂದಿಗೆ ವಿಲೀನಗೊಳಿಸಲಾಗಿಲ್ಲ. ಸಾಂಸ್ಕೃತಿಕವಾಗಿ ಬೇಗೂರು ಮತ್ತು ಚಿಕ್ಕಬೇಗೂರು ಬೆಸೆದುಕೊಂಡಿದ್ದು, ಇಂದು ಇವುಗಳ ಕೊಂಡಿಯನ್ನು ಭೌಗೋಳಿಕವಾಗಿ ಬೇರ್ಪಡಿಸಿದ್ದಾರೆ. ಸರ್ಕಾರದ ಪರಿಭಾಷೆಯಲ್ಲಿ ಇದು ಮೀಸಲು ಕ್ಷೇತ್ರವಾಗಿದ್ದು ಆನೇಕಲ್‌ನಿಂದ ಬೇರ್ಪಡಿಸಿದ್ದರಿಂದ ಸಾಮಾನ್ಯ ಕ್ಷೇತ್ರವಾಗಿದೆ. ಹಿಂದುಳಿದ ಹಾಗೂ ಅಲ್ಪಸಂಖ್ಯಾತರು ಅಧಿಕ ಪ್ರಮಾಣದಲ್ಲಿ ಕಂಡುಬರುತ್ತಾರೆ. ಇಂದು ಇಲ್ಲಿನ ಜನ ಬೆಂಗಳೂರು

ದಕ್ಷಿಣ ವಿಧಾನಸಭೆಗೆ ಒಳಗೊಂಡಿದ್ದರೆ, ಲೋಕಸಭೆ ಚುನಾವಣೆಗೆ ಬೆಂಗಳೂರು ಗ್ರಾಮಾಂತರ ವ್ಯಾಪ್ತಿಗೆ ಬರುತ್ತದೆ. ಸಂಪೂರ್ಣವಾಗಿ ಹಲವಾರು ದಶಕಗಳ ಕಾಲದವರೆಗೆ ಕಾಂಗ್ರೆಸ್ ಪಕ್ಷದ ಹಿಡಿತಕ್ಕೊಳಪಟ್ಟಿತು. ಈಗಷ್ಟೇ ಬಿ.ಜೆ.ಪಿ. ಪಕ್ಷವನ್ನು ಜನರು ಬೆಂಬಲಿಸಿರುವುದನ್ನು ಕಂಡಾಗ ಜನರ ಮನೋಭಾವ ಬದಲಾದಂತೆ ಕಂಡುಬರುತ್ತದೆ.

ಬೇಗೂರು ಕ್ಷೇತ್ರದಲ್ಲಿ ಇಂದಿಗೂ ಸಹ ತಿಗಳ ಜನಾಂಗದವರು ಕೃಷಿಯಲ್ಲಿ ನಿರತವಾಗಿದ್ದು, ಸೊಪ್ಪು, ತರಕಾರಿಯನ್ನು ಬೆಳೆಯುತ್ತಾರೆ. ಬೆಂಪ್ಪೂರು-೧೨ರ ಭಾಗದಲ್ಲಿ ರಾಗಿ ಮತ್ತು ಭತ್ತ ಸಾಮಾನ್ಯ ಬೆಳೆ. ಆದರೆ ಬೇಗೂರು ಪ್ರದೇಶದಲ್ಲಿ ಈಗ ಕೃಷಿ ಸಂಪೂರ್ಣವಾಗಿ ನಿಂತರೂ, ಸ್ವಲ್ಪಮಟ್ಟಿಗೆ ತೋಟಗಾರಿಕೆ ಹಾಗೆಯೇ ಇದೆ. ಜನರು ತಮ್ಮ ಕೆಲಸ ಕಾರ್ಯಗಳನ್ನು ಕೈಗಾರಿಕೆಗಳಿಗೆ ಮೊರೆಹೋಗುವುದು ಸಾಮಾನ್ಯವಾಗಿದೆ.

ಇಂದು ಬೇಗೂರುನ್ನು ಸಾಂಸ್ಕೃತಿಕವಾಗಿ ಉಳಿಸಿಕೊಳ್ಳುವ ಅವಶ್ಯಕತೆ ಹಾಗೂ ಜವಾಬ್ದಾರಿ ಆ ಊರಿನ ಜನರ ಮೇಲಿದೆ. ಸಾಂಸ್ಕೃತಿಕ ಹಿತರಕ್ಷಣೆಗಾಗಿ ಒಂದು ವೇದಿಕೆ ಸಿದ್ಧವಾಗಬೇಕಾಗಿದೆ. ಇಲ್ಲವಾದ ಪಕ್ಷದಲ್ಲಿ ವೀರಗಲ್ಲು, ಮಾಸ್ತಿಕಲ್ಲು ಜನರ ಕಾಲು ಕಸವಾಗುವ ಅಪಾಯದಲ್ಲಿದೆ ಎಂದು ಹೇಳುವುದರಲ್ಲಿ ವಿಷಾದವಿದೆ. ಇಲ್ಲಿನ ಜನರಲ್ಲಿ ಆರ್ಥಿಕ ಲಾಭ, ರಾಜಕೀಯ ಲಾಭದಿಂದ ಜನರನ್ನು ಬಲಿಪಶು ಮಾಡುತ್ತಿದ್ದು, ಬೇಗೂರಿನಲ್ಲಿ ಮುಂದೊಂದು ದಿನ ಜನಾಂಗಿಯ ದ್ವೇಷ, ಧಾರ್ಮಿಕವಾಗಿ ಬಲಿಷ್ಠವಾಗುವ ಲಕ್ಷಣಗಳು ಅಧಿಕವಾಗಿ ಕಂಡುಬರುತ್ತದೆ. ಹಿಂದೂ ಹಾಗೂ ಕ್ರೈಸ್ತ ಧರ್ಮದ ನಡುವೆ ಸಾಮರಸ್ಯದ ಕೊರತೆಯಿದ್ದು ಎರಡು ಧರ್ಮೀಯರು ಸಹ ಒಗ್ಗಟ್ಟಿನಿಂದ ಹೋಗಬೇಕಾಗುತ್ತದೆ. ಇತ್ತೀಚಿಗಷ್ಟೇ ನಡೆದ ಬೇಗೂರು ಜಾತ್ರೆಯ ಸಮಯದಲ್ಲಿ ವಾಡಿಕೆಯಂತೆ ಬ್ರಹ್ಮರಥೋತ್ಸವ ಸಮಯಕ್ಕೆ ಹಿಂದಿನ ದಿನ ವಿಷ್ಣುವಿನ ವಿಗ್ರಹವುಳ್ಳ ದೇವರನ್ನು ಹೂವಿನ ಪಲ್ಲಕ್ಕಿಯಲ್ಲಿ ಮೆರವಣಿಗೆ ಮಾಡುವುದು ವಾಡಿಕೆ. ಅದರಂತೆ ಈ ವರ್ಷವೂ ಸಹ ಮೆರವಣಿಗೆಗೆ ಸಿದ್ಧವಾದ ಸಮಯದಲ್ಲಿ ಕ್ರೈಸ್ತ ಧರ್ಮೀಯರು ಕ್ರಿಸ್ತನ ಮೆರವಣಿಗೆ ನಡೆಸಿದ್ದು, ದ್ವಂದ್ವತೆಗೆ ಕಾರಣವಾಯಿತು. ಕಾರಣ ಕ್ರಿಸ್ತ ಧರ್ಮೀಯರು ಆಚರಿಸುವ ಕ್ರಿಸ್ತಜಯಂತಿಯು ಮುಗಿದ ಹನ್ನೊಂದು ದಿನಗಳಿಗೆ ಸರಿಯಾಗಿ ಏಸುದೇವರ ಮೆರವಣಿಗೆ ಮಾಡುವುದು ಅವರ ಆಚರಣೆಗಳಲ್ಲಿ ಒಂದು, ಆದರೆ ಕಾಕತಾಳಿಯವೋ ಎನ್ನುವಂತೆ ಬೇಗೂರು ನಾಗೇಶ್ವರ ರಥೋತ್ಸವದ ಸಮಯಕ್ಕೆ ಅವರ ಮೆರವಣಿಗೆಯ ದಿನಾಂಕ ನಿಗದಿಯಾದದ್ದು ಗೊಂದಲಕ್ಕೆ ಕಾರಣವಾಯಿತು. ಮೆರವಣಿಗೆಯ ಸಂದರ್ಭದಲ್ಲಿ ಎರಡು ಉತ್ಸವಗಳು ಏಕಕಾಲದಲ್ಲಿ ಸಂಭವಿಸಿದಾಗ ಗೊಂದಲವುಂಟಾಗುವುದು ಸಹಜವೇ ಸರಿ. ಆದರೆ ಅದನ್ನು ಯಾವುದೇ ಸಮಸ್ಯೆಯಿಲ್ಲದೆ ಸಾಮರಸ್ಯದಿಂದ ಆಚರಿಸಿದರೆ ಸಮಸ್ಯೆ ಉಂಟಾಗುವುದಿಲ್ಲ. ಕ್ಷುಲ್ಲಕ ಮನಸ್ಸಿಗೆ, ಯೋಚನೆಗೆ ಮುಂದಾದರೆ ಮುಂದೊಂದು ದಿನ ಅದರ ಪರಿಣಾಮ ಭೀಕರತೆಯನ್ನು ಇಲ್ಲಿನ ಜನ ಎದುರಿಸಬೇಕಾಗುತ್ತದೆ. ನಮ್ಮ

ದೇವರ ಮೆರವಣಿಗೆ ಮೊದಲು ಎಂಬ ದೃಢನಿರ್ಧಾರದಿಂದ ಮುಂದಾಗುವುದು ತಪ್ಪಾಗುತ್ತದೆ. ಆದ್ದರಿಂದ ಇಲ್ಲಿ ಎರಡು ಧರ್ಮಗಳ ನಡುವೆ ಸಾಮರಸ್ಯವಿದ್ದರೂ ಸಹ ಅದನ್ನು ಬಲಿಷ್ಠಗೊಳಿಸುವ ಅವಶ್ಯಕತೆಯಿದೆ.

ಬೇಗೂರಿನಲ್ಲಿ ಮುಸ್ಲಿಂಧರ್ಮ ಇತ್ತೀಚೆಗಷ್ಟೇ ಬಂದು ನೆಲೆಗೊಂಡಿರುವುದು ಕಾಣಬಹುದು. ಇಲ್ಲಿನ ಜನರಿಗೆ ಧರ್ಮಗಳ ಮೇಲೆ, ದೇವರುಗಳ ಮೇಲೆ, ಇರುವಷ್ಟು ನಂಬಿಕೆ, ಶ್ರದ್ಧೆ, ಸಾಂಸ್ಕೃತಿಕವಾಗಿ ಈ ಊರಿನ ಮಹತ್ವದ ಕಡೆಗೆ ಇರಬೇಕಾದದ್ದು ಸೂಕ್ತವಾಗಿದೆ. ಮುಂದಿನ ಪೀಳಿಗೆಗೆ ಸಾಂಸ್ಕೃತಿಕವಾಗಿ ಬೇಗೂರನ್ನು ಅರ್ಪಿಸುವ ಜವಾಬ್ದಾರಿಯು ಪ್ರತಿಯೊಬ್ಬ ನಾಗರೀಕನ ಮೇಲೆ ಇದೆ. ಮಣ್ಣಿನ ಕೋಟೆಯ ರಕ್ಷಣೆ ಪ್ರತಿಯೊಬ್ಬ ನಾಗರೀಕನ ಜವಾಬ್ದಾರಿ. ಅದನ್ನು ಒಂದು ಸ್ಮಾರಕವಾಗಿ ಕಂಡು ರಕ್ಷಿಸಬೇಕಾಗಿದೆ.

ಒಟ್ಟಾರೆ ಬೇಗೂರಿನ ಇಂದಿನ ಸ್ಥಿತಿಯನ್ನು ಕಂಡಾಗ ಗೊಂದಲದ ಗೂಡಾಗಿ ಕಂಡರೂ ಸಹ ಆಚರಣೆ, ಸಂಪ್ರದಾಯ, ವಿಧಿ-ವಿಧಾನಗಳಲ್ಲಿ ಸಾಂಸ್ಕೃತಿಕವಾಗಿ ಮಹತ್ವಯುತವಾಗಿಯೇ ಇದೆ ಎಂದು ಹೇಳಬಹುದು.

# ಸಮಾರೋಪ

'ಬೇಗೂರು-ಒಂದು ಸಾಂಸ್ಕೃತಿಕ ಅಧ್ಯಯನ' ವಿಷಯದಡಿಯಲ್ಲಿ ಬೇಗೂರು ಕ್ಷೇತ್ರದ ಬಗ್ಗೆ ಸಮಗ್ರವಾದ ಅಧ್ಯಯನವನ್ನು ಮಾಡಲಾಗಿದೆ. ಈ ಕ್ಷೇತ್ರವನ್ನು ಹಲವಾರು ವಿದ್ವಾಂಸರು ನಿರಂತರ ಅಧ್ಯಯನಕ್ಕೆ ತೊಡಗಿಸಿ ಹೊಸ ವಿಚಾರಗಳನ್ನು ಬೆಳಕಿಗೆ ತರುತ್ತಲೇ ಇದ್ದಾರೆ. ಆದರೆ ಅವರ ಆಸಕ್ತಿ ಕ್ಷೇತ್ರಗಳು ದೇವಾಲಯದ ವಾಸ್ತುಶಿಲ್ಪ, ಮಣ್ಣಿನಕೋಟೆ, ಶಾಸನಗಳಷ್ಟಕ್ಕೆ ಸೀಮಿತವಾಗಿರುವುದರಿಂದ ಸಾಂಸ್ಕೃತಿಕವಾಗಿ ಇಲ್ಲಿನ ಜನಜೀವನ, ಆರ್ಥಿಕ ಸ್ಥಿತಿಗತಿಗಳನ್ನು ತಿಳಿಸುವ ಪ್ರಯತ್ನ ಈ ಅಧ್ಯಯನದಲ್ಲಿ ಮಾಡಲಾಗಿದೆ.

ಬೆಂಗಳೂರು ದಕ್ಷಿಣ ಭಾಗ ಸಂಪೂರ್ಣವಾಗಿ ಗಂಗರ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದಕ್ಕೆ ಆನೇಕಲ್ ಕ್ಷೇತ್ರದಲ್ಲಿ ಹಲವಾರು ನಿದರ್ಶನಗಳು ಆಧಾರಗಳು ದೊರೆಯುತ್ತದೆ. ಅಂತಹ ಪ್ರಸಿದ್ಧ ಐತಿಹಾಸಿಕ ಕ್ಷೇತ್ರದಲ್ಲಿ ಬೇಗೂರು ಅಗ್ರಮಾನ್ಯವಾಗಿ ನಿಲ್ಲುತ್ತದೆ. ಗಂಗರ ಕಾಲದಲ್ಲಿ ಬೇಗೂರು ಸಂಪೂರ್ಣ ಅವರ ವಶಕ್ಕೆ ಒಳಪಟ್ಟಿದ್ದು, ಮಾಂಡಲಿಕರಿಂದ ಬೇಗೂರನ್ನು ನಿಯಂತ್ರಿಸಲಾಗುತ್ತಿದ್ದು, 'ಬೆಂಪೂರು-೧೨' ಎಂಬ ಖ್ಯಾತಿಗೆ ಪಾತ್ರವಾಗಿದ್ದ ಬೇಗೂರು ಸುತ್ತಮುತ್ತಲಿನ ಹಲವಾರು ಊರುಗಳಿಗೆ ಕೇಂದ್ರವಾಗಿ ಸಾಂಸ್ಕೃತಿಕವಾಗಿ ಮಹತ್ವವೆನಿಸಿದೆ. ಅದ್ದರಿಂದ 'ಬೆಂಪ್ಪೂರು-೧೨' ಭಾಗಕ್ಕೆ ಬರುವ ಪ್ರದೇಶ, ಐತಿಹಾಸಿಕವಾಗಿ, ಸಾಂಸ್ಕೃತಿಕವಾಗಿ ವಿಶೇಷವೆನಿಸಿದ ಊರುಗಳ ಬಗ್ಗೆ ಆ ಸ್ಥಳನಾಮಗಳ ಬಗೆಗಿನ ಅಧ್ಯಯನ ಕ್ಷೇತ್ರಕಾರ್ಯದ ಮೂಲಕ ಸಮಗ್ರವಾಗಿ ಮಾಡಲಾಗಿದೆ. ಒಂದೊಂದು ಊರಿಗೂ ತನ್ನದೇ ಆದ ವಿಶೇಷತೆ ಇರುತ್ತದೆ. ಪ್ರಕೃತಿದತ್ತವಾಗಿರಬಹುದು, ವ್ಯಕ್ತಿನಾಮವಿರಬಹುದು ಯಾವುದಾದರೂ ಘಟನೆಯನ್ನಾಧರಿಸಿಯೋ ಒಂದು ಊರಿಗೆ ಹೆಸರನ್ನು ಇಡಲಾಗಿರುತ್ತದೆ. ಕಾರಣಾಂತರಗಳಿಂದ ಆ ಮೂಲ ರೂಪ ಬದಲಾಗಿ ಹಲವಾರು ಸಣ್ಣಕತೆಗಳು, ಉಪಕತೆಗಳು ಊರಬಗ್ಗೆ ಸೃಷ್ಟಿಯಾಗುವುದುಂಟು. ಆದ್ದರಿಂದ ಎಲ್ಲಾ ಆಧಾರಗಳನ್ನು ಸಂಗ್ರಹಿಸಿ ಈ ಸ್ಥಳನಾಮಕ್ಕೆ ಸಂಬಂಧಿಸಿದಂತೆ ಸೂಕ್ತವಾದ ನಿರ್ಣಯಗಳನ್ನು ತೆಗೆದುಕೊಳ್ಳಲಾಗಿದೆ. ಜೊತೆಗೆ ಆ ಊರಿನ ವಿಶೇಷತೆಯನ್ನು ಆಚರಣೆ, ಸಂಪ್ರದಾಯಗಳನ್ನು ದಾಖಲಿಸುವ ಕಾರ್ಯ ಮಾಡಲಾಗಿದೆ.

ಬೇಗೂರು ಅತಿ ಪ್ರಾಚೀನ ಕಾಲದಲ್ಲಿಯೇ ಗಂಗರ ಆಳ್ವಿಕೆಗೆ ಒಳಪಟ್ಟು ಹೆಚ್ಚು ಜನನಿಬಿಡ ಪ್ರದೇಶವಾಗಿತ್ತು ಎಂಬುದನ್ನು ನಾವು ಮೊದಲೇ ತಿಳಿದುಕೊಂಡಿದ್ದೇವೆ. ಆದರೆ ಯಾವುದೇ ರಾಜಮನೆತನಕ್ಕೆ ಒಳಪಟ್ಟ ಪ್ರದೇಶಗಳಲ್ಲಿ ನಮಗೆ ಸಿಗುವ ಬಹುಮುಖ್ಯ ಆಧಾರಗಳೆಂದರೆ ಶಾಸನಗಳು ಹಾಗೂ ದೇವಾಲಯಗಳು. ಇಲ್ಲಿನ ಐತಿಹಾಸಿಕವಾಗಿ ಪ್ರಸಿದ್ಧ ಪಡೆದ ದೇವಾಲಯಗಳ ಪರಿಚಯವನ್ನು ಸ್ಥೂಲವಾಗಿ ಮಾಡಲಾಗಿದ್ದು, ಗಂಗರ ಮಾಂಡಲಿಕರು ಕೂಡ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿದ್ದಾರೆ ಎಂಬುದಕ್ಕೆ ಸುಂದರವಾದ ನಾಗೇಶ್ವರ ದೇವಾಲಯವೇ ಸಾಕ್ಷಿಯಾಗಿ ನಿಲ್ಲುತ್ತದೆ.

ಈ ದೇವಾಲಯದ ನಿರ್ಮಾಣ, ವಿಶೇಷತೆ, ವಾಸ್ತುಶಿಲ್ಪ, ಜೀರ್ಣೋದ್ಧಾರಗಳು ಮುಂತಾದ ವಿಚಾರಗಳನ್ನು ತಿಳಿಯುವ ಮೂಲಕ ಈ ಅಧ್ಯಯನ ಸಾರ್ಥಕತೆಯನ್ನು ಪಡೆಯುತ್ತದೆ. ಕಾರಣ ಬೇಗೂರಿನ ಬಗ್ಗೆ ಸಿಗುವ ಬಹುತೇಕ ಆಧಾರಗಳ ಕಣಜದಂತೆ ಬೇಗೂರು ದೇವಾಲಯ ಕಂಡುಬರುತ್ತದೆ. ಬೇಗೂರು ಸಾಂಸ್ಕೃತಿಕವಾಗಿ ಎಷ್ಟು ಗಟ್ಟಿಗೊಂಡಿತ್ತು ಎಂಬುದಕ್ಕೆ ಗಡಸುಕಲ್ಲಿನಲ್ಲಿ ಅರಳಿರುವ ಸುಂದರವಾದ ಮೂರ್ತಿಗಳೇ ಸಾಕ್ಷಿ. ಹಾಗೂ ಈ ಪ್ರದೇಶದ ಇತಿಹಾಸ ತಿಳಿಯಬರುವುದೇ ಶಾಸನಗಳಿಂದ ಬಹುತೇಕ ಶಾಸನಗಳು ದೇವಾಲಯದ ಆವರಣದಲ್ಲಿಯೇ ದೊರೆತಿರುವುದರಿಂದ ದೇವಾಲಯವನ್ನು ಆಧಾರಗಳ ಕಣಜ ಎಂದು ಕರೆದದ್ದು. ಇಲ್ಲಿನ ಶಾಸನಗಳು 'ಬೆಂಪ್ಪೂರು-೧೨', ನಾಗತ್ತರ, ಪೇಗೂರು, ಬುಟ್ಟಣಸೆಟ್ಟಿ, ಬೆಂಗಳೂರು ಕಾಳಗ, ದೇವಾಲಯದ ನಿರ್ಮಾಣ ಮುಂತಾದ ಹಲವಾರು ವಿಷಯಗಳನ್ನು ತಿಳಿಯಲು ಸಹಕಾರಿಯಾಗಿದೆ. ಅಂದಿನ ಅರಸರಿಗೆ ಶಾಸನಗಳನ್ನು ರಕ್ಷಿಸುವ ವಿಷಯದಲ್ಲಿ ಹೆಚ್ಚು ಜಾಗರೂಕತೆಯನ್ನು ವಹಿಸಿರುವುದಕ್ಕೆ ಬೇಗೂರು ಸಾಕ್ಷಿಯಾಗುತ್ತದೆ. ರಕ್ಷಣೆಯ ದೃಷ್ಟಿಯಿಂದ ದೇವಾಲಯವನ್ನು ಆಯ್ಕೆ ಮಾಡಿಕೊಂಡು ಶಾಸನಗಳನ್ನು ಹಾಕಿಸಿರುವುದರಿಂದಲೇ ಇಂದಿಗೂ ಇದರ ಮಹತ್ವ ತಿಳಿಯಲು ಸಾಧ್ಯವಾಯಿತು. ಬೇಗೂರಿನಲ್ಲಿ ದೊರೆತ ಶಾಸನಗಳ ಪಾಠದ ಜೊತೆಗೆ ಅದರ ಮಹತ್ವವನ್ನು ಹಲವಾರು ಮೂಲಗಳಿಂದ ಮಾಹಿತಿ ಸಂಗ್ರಹಿಸಿ, ವಿಶ್ಲೇಷಿಸಲಾಗಿದೆ. ನಾಗತ್ತರನ ಶಾಸನ ಹಾಗೂ ಬೆಂಗಳೂರು ಪದ ನಿಷ್ಪತ್ತಿಯ ಶಾಸನ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಈ ಭಾಗದಲ್ಲಿ ದೊರೆತ ಎಲ್ಲಾ ಶಾಸನಗಳ ಪಾಠವನ್ನು ದಾಖಲಿಸಿದ್ದು ಕೆಲವು ಶಾಸನಗಳನ್ನು ಮಹತ್ವದ ದೃಷ್ಟಿಯಿಂದ ವಿಶ್ಲೇಷಿಸಲಾಗಿದೆ.

ಕರ್ನಾಟಕದಾದ್ಯಂತ ಹಲವಾರು ರಾಜಮನೆತನಗಳು ಆಳ್ವಿಕೆ ನಡೆಸಿ ಸುರಕ್ಷತೆಯ ದೃಷ್ಟಿಯಿಂದ ಹಲವಾರು ಭದ್ರವಾದ ಕೋಟೆಗಳನ್ನು ಕಟ್ಟಿಕೊಂಡಿದ್ದನ್ನು ಸ್ಮರಿಸಬಹುದು. ರಕ್ಷಣೆಯ ದೃಷ್ಟಿಯಿಂದ ಕೋಟೆ ಮಹತ್ವಯುತವಾದದ್ದು ಹಾಗೆಯೇ ಬೇಗೂರು ಕ್ಷೇತ್ರದಲ್ಲಿ ವಿಶೇಷವೆನಿಸುವ ಕರ್ನಾಟಕದ ಮೊಟ್ಟಮೊದಲ ಮಣ್ಣಿನಕೋಟೆಯನ್ನು ನಿರ್ಮಿಸಿರುವುದನ್ನು ಕಾಣಬಹುದು. ಹೆಚ್ಚು ದಾಳಿಗಳಿಂದ ರಕ್ಷಣೆಯನ್ನು ಪಡೆಯಲು ರಾಜರು ಕಂಡ ಮೂಲದಾರಿಗಳಲ್ಲಿ ಕೋಟೆಯು ಒಂದು. ಗಂಗರ ಆಳ್ವಿಕೆಗೆ ಒಳಪಟ್ಟ ಪ್ರದೇಶದಲ್ಲಿರುವ ಏಕೈಕ ಮಣ್ಣಿನ ಕೋಟೆಯಾದ್ದರಿಂದ ಈ ಕೋಟೆಯ ಬಗ್ಗೆ ಅದರ ಮಹತ್ವದ ಬಗ್ಗೆ, ಅದರ ರಚನಾ ವಿಶಿಷ್ಟತೆಯನ್ನು ಸಮರ್ಪಕವಾಗಿ ವಿವರಿಸುವ ಕಾರ್ಯ ಈ ಅಧ್ಯಯನದಲ್ಲಿ ಮಾಡಲಾಗಿದೆ. ಜೊತೆಗೆ ಈ ಕ್ಷೇತ್ರದಲ್ಲಿ ಹಲವಾರು ಸ್ಮಾರಕಶಿಲೆಗಳು ದೊರೆಯುವುದರಿಂದ ಅದರ ಅಡಿಯಲ್ಲಿ ವೀರಗಲ್ಲು, ಮಾಸ್ತಿಕಲ್ಲು ಕೆಲವು ಅವಶೇಷಗಳ ಮಹತ್ವ ಅದರ ಸ್ವರೂಪವನ್ನು ವಿವರಿಸಲಾಗಿದೆ.

ಪ್ರಾಚೀನ ಕಾಲದಿಂದಲೂ ಬೇಗೂರು ತನ್ನದೇ ಆದ ಸಾಂಸ್ಕೃತಿಕ ಮಹತ್ವವನ್ನು ಉಳಿಸಿಕೊಂಡೇ ಬಂದಿರುವುದು ಕಾಣುತ್ತೇವೆ. ಇಲ್ಲಿನ ಜಾತಿ ಹಾಗೂ ಧರ್ಮವ್ಯವಸ್ಥೆ, ಆರ್ಥಿಕ ಸ್ಥಿತಿಗತಿಗಳು, ಇಲ್ಲಿನ ಪ್ರಮುಖ ಆಚರಣೆಗಳು ಎಲ್ಲವು ಸಹ ವಿಶೇಷವಾಗಿ ಕಂಡುಬರುತ್ತವೆ. ಬೇಗೂರು ನಿರಂತರ ಬದಲಾಗುತ್ತ ಬಂದಿದ್ದು ಹಲವಾರು ಜಾತಿಗಳ, ಧರ್ಮಗಳ ಸಾಮರಸ್ಯತೆಯನ್ನು ಕಂಡ ಪ್ರದೇಶ. ಇಲ್ಲಿನ ಜನಪದೀಯರ ಹೇಳಿಕೆಯಂತೆ ಹಲವಾರು ಮಹತ್ವದ ವಿಚಾರಗಳು ತಿಳಿದುಬರುತ್ತದೆ. ಒಟ್ಟಾರೆ ಈ ಭೂಮಿ ಮಳೆಯನ್ನು ಆಶ್ರಯಿಸಿದ್ದರೂ ಸಹ ಫಲವತ್ತಾದ ಬೆಳೆಯನ್ನು ನೀಡುವಂತಹ ವಿಶಾಲಪ್ರದೇಶವಿದ್ದು ಅದಕ್ಕೆ ಕಳಶಪ್ರಾಯವಾಗಿ ಎರಡು ಕೆರೆಗಳನ್ನು ಕಾಣಬಹುದು. ಆರ್ಥಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ ತನ್ನದೇ ಆದ ವಿಶೇಷರೂಪವನ್ನು ಪಡೆದುಕೊಂಡ ಪ್ರದೇಶ ಎಂದು ಹೇಳಬಹುದು.

ಬೆಂಗಳೂರು ಪ್ರದೇಶದ ಅತಿ ಪ್ರಾಚೀನ ಪ್ರದೇಶಗಳಲ್ಲಿ ಒಂದಾದ ಬೇಗೂರು ನಿರಂತರ ಬದಲಾಗುತ್ತ, ವಿಕಾಸಹೊಂದುತ್ತಾ ಬಂದಿದೆ. ಇಲ್ಲಿ ದೇವಾಲಯ ಹಲವಾರು ಜೀರ್ಣೋದ್ಧಾರ ಕಂಡು ಸುಮಾರು ೪ ಕೋಟಿಮೊತ್ತದ ಬೃಹತ್ ನಾಲ್ಕು ಗೋಪುರದ ನಿರ್ಮಾಣ ಭರದಿಂದ ಸಾಗಿದೆ. ಪಂಚಾಯಿತಿ ಪ್ರದೇಶದಿಂದ ಕಳಚಿಕೊಂಡು ಪುರಸಭಾ ವ್ಯಾಪ್ತಿಗೆ ಸೇರಿದೆ. ಸಂಪೂರ್ಣ ಕೃಷಿಭೂಮಿ ರಿಯಲ್ ಎಸ್ಟೇಟ್‌ನಿಂದ ಕಾಂಕ್ರೀಟ್ ಕಾಡಾಗಿ ಬದಲಾಗಿದೆ. ಈ ಎಲ್ಲ ಬದಲಾವಣೆಗಳ ನಡುವೆ ಐತಿಹಾಸಿಕ ಕ್ಷೇತ್ರವನ್ನು ರಕ್ಷಿಸುವ ಕಾರ್ಯ ನಡೆಯಬೇಕಾಗಿದೆ. ಮಣ್ಣಿನಕೋಟೆಯಂತೂ ಸಂಪೂರ್ಣ ವಿನಾಶದ ಅಂಚನ್ನು ತಲುಪಿದರೆ ಈ ಪ್ರದೇಶದಲ್ಲಿ ಸಿಗುವ ಕೆಲವು ಮುಖ್ಯ ಆಧಾರಗಳಾದ ವೀರಗಲ್ಲು, ಮಾಸ್ತಿಗಲ್ಲು, ತೀರ್ಥಂಕರರ ಮೂರ್ತಿಗಳನ್ನು ರಕ್ಷಿಸುವ ಕಾರ್ಯ ಸಾಗಬೇಕಾಗಿದೆ. ಆಧುನಿಕತೆಯ ಬೀಸಿಗೆ ಸಿಲುಕಿದ ಬೇಗೂರು ಇಂದಿಗೂ ಸಾಂಸ್ಕೃತಿಕವಾಗಿ ಮಹತ್ವವನ್ನು ಪಡೆಯಲು ಕಾರಣವಾದ ಆಧಾರಗಳ ರಕ್ಷಣೆಯ ದೋಷ ಎದ್ದುಕಾಣುತ್ತದೆ. ಒಟ್ಟಾರೆ 'ಬೇಗೂರು ಒಂದು ಸಾಂಸ್ಕೃತಿಕ ಅಧ್ಯಯನ' ಬೇಗೂರಿನ ಬಗೆಗೆ ಒಂದು ರೀತಿ ಕ್ಷ-ಕಿರಣವನ್ನು ಬೀರುವ ಪ್ರಯತ್ನ ಮಾಡಲಾಗಿದೆ. ಸ್ವಲ್ಪಮಟ್ಟಿಗಾದರೂ ಬೇಗೂರಿನ ಬಗೆಗಿನ ಜ್ಞಾನಶಾಖೆಯನ್ನು ವಿಸ್ತರಿಸುವ ಪ್ರಯತ್ನ ಮಾಡಿದ್ದೇನೆ ಎಂಬ ಭಾವನೆ ನನಗಿದೆ.

## ಗ್ರಂಥ ಋಣ


೧. ಬೆಂಗಳೂರು ದರ್ಶನ — (ಸಂ) ಪ್ರೊ.ಎಲ್.ಎಸ್.ಶೇಷಗಿರಿರಾವ್

೨. ಎಫಿಗ್ರಾಫಿಯಾ ಕರ್ನಾಟಿಕ ಸಂಪುಟ ix — ಬಿ.ಎಲ್.ರೈಸ್

೩. ಬೆಂಗಳೂರು ಜಿಲ್ಲೆ ಗೆಜೆಟಿಯರ್ — ಕರ್ನಾಟಕ ಸರ್ಕಾರ ಬೆಂಗಳೂರು

೪. ಸ್ಥಳನಾಮ ಅಧ್ಯಯನಗಳು — ವಿ.ಗೋಪಾಲಕೃಷ್ಣ, ವಿದ್ಯಾಗಿರಿ ಪ್ರಕಾಶನ, ಕೋಲಾರ, ೧೯೮೭

೫. ಸ್ಥಳನಾಮಗಳ ಅಧ್ಯಯನ ಮತ್ತಿತ್ತರ ಪ್ರಬಂಧಗಳು — ಡಾ.ಕೆ.ಜೆ.ಗುರುಮೂರ್ತಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ೨೦೦೭

೬. ತಲಕಾಡು ಗಂಗರ ದೇವಾಲಯಗಳು ಒಂದು ಅಧ್ಯಯನ — ಡಾ.ದೇವರಕೊಂಡಾರೆಡ್ಡಿ, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು. ೧೯೯೪

೭. ಗಂಗರ ಶಿಲ್ಪಕಲೆ — ಡಾ.ದೇವರಕೊಂಡಾರೆಡ್ಡಿ, ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು. ೧೯೯೩

೮. ಭಾರತದ ದೇವಾಲಯದ ನೆಲೆ-ಹಿನ್ನೆಲೆ — ಪ್ರೊ.ಎಸ್.ಕೆ.ರಾಮಚಂದ್ರರಾವ್, ಐ.ಬಿ.ಹೆಚ್.ಪ್ರಕಾಶನ, ಗಾಂಧಿನಗರ ಬೆಂಗಳೂರು.೧೯೮೦

೯. ಕರ್ನಾಟಕದ ವೀರಗಲ್ಲುಗಳು — ಡಾ. ಆರ್.ಶೇಷಶಾಸ್ತ್ರೀ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ೧೯೮೨

೧೦. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ — ಡಾ.ಎಂ.ಚಿದಾನಂದಮೂರ್ತಿ, ಸ್ವಪ್ನ ಪುಸ್ತಕ ಪ್ರಕಾಶನ ಬೆಂಗಳೂರು. ೨೦೦೨

೧೧. ಇತಿಹಾಸ ದರ್ಶನ — ಡಾ.ದೇವರಕೊಂಡಾರೆಡ್ಡಿ
ಸಂಪುಟ–೩, ಸಂಚಿಕೆ–೧
ಇತಿಹಾಸ ಅಕಾಡೆಮಿ, ಬೆಂಗಳೂರು.೧೯೮೮

೧೨. ಕನ್ನಡ ಶೈಲಿ ಕೈಪಿಡಿ — ಕನ್ನಡ ವಿಶ್ವವಿದ್ಯಾಲಯ, ಪ್ರಸಾರಾಂಗ
ಹಂಪಿ. ೨೦೦೮

೧೩. ಕನ್ನಡ ಲಿಪಿಯ ಉಗಮ ಮತ್ತು ವಿಕಾಸ — ಎ.ವಿ.ನರಸಿಂಹಮೂರ್ತಿ
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೪. ಶಾಸನ ಸಂಗ್ರಹ — (ಸಂ)ಎ.ಎಂ.ಅಣ್ಣಿಗೆರೆ, ಡಾ.ಆರ್.ಶೇಷಶಾಸ್ತ್ರಿ
ಕನ್ನಡ ಸಾಹಿತ್ಯ ಪರಿಷತ್ತು,
ಬೆಂಗಳೂರು. ೧೯೯೯

೧೫. ಕನ್ನಡ ಲಿಪಿ ಶಾಸ್ತ್ರ — ಎಂ.ಜಿ.ಮಂಜುನಾಥ, ಜಿ.ಕೆ.ದೇವರಾಜಸ್ವಾಮಿ
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
೨೦೦೪

೧೬. ಕರ್ನಾಟಕ ಲೋಚನ — ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ
ಸಂಪುಟ–೨೦, ಸಂಚಿಕೆ೧/೨
ಬೆಂಗಳೂರು. ೨೦೦೮

೧೭. ಕನ್ನಡ ಶಾಸನಶಿಲ್ಪ — ಡಾ.ಡಿ.ವಿ.ಪರಮಶಿವಮೂರ್ತಿ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ. ೧೯೯೯

೧೮. ಸಂಶೋಧನ ಪಥ — ಡಾ.ಆರ್.ಸುಂದರಂ,
ಡಾ.ಎನ್.ಎಸ್.ತಾರಾನಾಥ್
ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ
ಮೈಸೂರು. ೨೦೦೬

೧೯. ಕ್ರೈಸ್ತಧರ್ಮದ ಉದಯ — ಸ್ವಾಮಿ ಐ. ಅಂತಪ್ಪ
ಬೆಂಗಳೂರು. ೧೯೯೩

೨೦. ಸಾಂಸ್ಕೃತಿಕ ಅಧ್ಯಯನ ಡಾ. ರಹಮತ್ ತರೀಕೆರೆ
ಕರ್ನಾಟಕ ಸಾಹಿತ್ಯ ಅಕಾಡೆಮಿ
ಬೆಂಗಳೂರು. ೨೦೦೪

೨೧. ಶಾಸನ ಶಿಲ್ಪಿಗಳು ಎಂ.ಜಿ.ನಾಗರಾಜ
ಶ್ರೀಗೌರಿಗಂಗ ಪ್ರಕಾಶನ,
ಬೆಂಗಳೂರು. ೧೯೯೦





ಶ್ರೀ ನಾಗೇಶ್ವರ ದೇವಾಲಯ ಬೇಗೂರು

ಬೆಂಗುಳೂರು ಪದನಿಷ್ಟತ್ತಿ ಇರುವ
ಬೇಗೂರು ಶಾಸನ





ನಾಗೇಶ್ವರ ದೇವಾಲಯದಲ್ಲಿ ಇರುವ
ಬಸವಣ್ಣನ ಮೂರ್ತಿ

ನಾಗೇಶ್ವರ ದೇವಾಲಯದ
ಅದಿಷ್ಟಾನದಲ್ಲಿರುವ ತಿಗಳಾರಿ ಲಿಪಿ

(೧.)




ವೀರಗಲ್ಲು-೧



ವೀರಗಲ್ಲು-೨



(೨.) ವೀರಗಲ್ಲು-೩



ವೀರಗಲ್ಲು-೪

